|| ಶ್ರೀ ಗುರುಪ್ರಸನ್ನ ||



# ಭಾಗ್ಯರತ್ನ

ಅರ್ಥಾತ್

## ಸಾಧ್ವಿ ಸುಶೀಲಾ

ಸಾಮಾಜಿಕ ನಾಟಕ

ಕಥಾ ಲೇಖಕರು

ಶ್ರೀಮತಿ ನೀಲಮ್ಮನವರು ಶಾಂತಗಿರಿ, ಗದಗ.

ಪ್ರಕಾಶಕರು

ಎಮ್. ಎಸ್ ಶಾಬಾದಿಮಠ,

ಬುಕ್ಕ-ಡಿಪೊ

ಬೆಲೆ ೧-೭೫.

# ಪಾತ್ರಪರಿಚಯ



| | |
|---|---|
| ಈಶ್ವರಪ್ಪಾ | ದಲಾಲಿ ವ್ಯಾಪಾರಿ |
| ರಘು | ಈಶ್ವರಪ್ಪನ ಮಗಾ |
| ಚಂದ್ರು | ರಘುವಿನ ಮಿತ್ರಾ/ಉಡಾಳ |
| ರಂಗಪ್ಪಾ | ಕಾನನಹಳ್ಳಿ ರೈತಾ(ಬಡವ) |
| ಅಶೋಕ | ರಂಗಪ್ಪನ ಮಗಾ ( ವಕೀಲ ) |
| ಸಂಗಾ | ಈಶ್ವರಪ್ಪನ ಆಳುಮಗಾ |
| ರಾಮೂ | ಸಂಗನ ಅಳಿಯಾ |
| ಪುಟ್ಟ್ಯಾ | ಈಶ್ವರಪ್ಪನ ಗುಮಾಸ್ತ |

## ಸ್ತ್ರೀ ಪಾತ್ರ

| | |
|---|---|
| ಗೌರಾ | ಈಶ್ವರಪ್ಪನ ಹೆಂಡತಿ |
| ನಿಂಗಿ | ಸಂಗನ ಹೆಂಡತಿ |
| ಮೀರಾ | ರಘುವಿನ ಹೆಂಡತಿ ಕಲಿತವಳು |
| ಸುಶೀಲಾ | ಅಶೋಕನ ಹೆಂಡತಿ ಸಾಧ್ವಿ |

ನಿಂಗಪ್ಪಾ ಧ್ಯಾಮಪ್ಪಾ ಈರಪ್ಪಾ ಮತ್ತಿತರು



# ಸವಿನಯ ವಿನಂತಿ



ಈ ನಾಟಕವನ್ನು ರಂಗಭೂಮಿಯಮೇಲೆ ತರಲಿಚ್ಛಿಸುವವರು ನಾಟಕದ ಲೇಖಕರಿಗೆ ಇಪ್ಪತ್ತು ರೂಪಾಯಿ ಕಳ್ಸಿಕೊಡಬೇಕು. ನೀವು ಕಳಿಸಿದ ರೂಪಾಯಿಗಳನ್ನು ೧೦೮ ಪತ್ರಿಗಿಡದ ಸಹಾಯಾರ್ಥವಾಗಿ ವಿನಿಯೋಗಿಸಲ್ಪಡುವದು. ಒಂದು ಸಮಯ ಹಾಗೇ ರಂಗಭೂಮಿಗೆ ತಂದರೆ ಈ ಲೇಖಕರ ಸಂಕಲ್ಪಕ್ಕೆ ಅಪಾತ್ರರಾಗುವಿರಿ ಅಂತಾ ನನ್ನ ಸವಿನಯ ವಿನಂತಿ.

ತಮ್ಮ ಲೇಖಕರು

**ಶ್ರೀಮತಿ ನೀಲಮ್ಮ ಶಾಂತಗಿರಿ ಸಾ|| ಗದಗ.**

# — ನನ್ನನುಡಿ —



ರಂಗಭೂಮಿಯ ಅನುಭವ ಇಲ್ಲದ ನಾನು ಕಲಾಸೇವೆಯನು, ಮಾಡಲು ಬಯಸಿ ಕನ್ನಡ ಕಲಾಭಿಮಾನಿಗಳಿಗೆ ನನ್ನ ಅಲ್ಪಕಲೆಯಿಂದ ಬರೆದ ಒಂದು ನಾಟಕ ಅಂದರೆ "**ಭಕ್ತಿಜ್ಯೋತಿ**" ಎಂಬ ಸಾಮಾಜಿಕ ನಾಟಕ ವನ್ನು ಅರ್ಪಣೆಮಾಡಿದ್ದೆ. ಆ ನಾಟಕಕ್ಕೆ ಎಷ್ಟೋ ಎಡರು ತೊಡರು ಬಂದರೂ ಅದು ರಂಗಭೂಮಿಗೆ ಬಂದು ಶ್ರೇಯಸ್ಸು ಗಳಿಸಿತು. ಅದಾದ ಮೇಲೆ ಅತೀವ ಪ್ರಯಾಸಪಟ್ಟು ಈ ಎರಡನೇ ಕೃತಿಯಾದ "**ಭಾಗ್ಯರತ್ನ**"ವೆಂಬ ಸಾಮಾಜಿಕ ನಾಟಕವನ್ನು ಬರೆದು, ಅದು ರಂಗಭೂಮಿಗೆ ಬಾರದೆ ನಿರಾಶ್ರಿತಳಾದೆ. ಏನೋ ದೈವಸಂಕಲ್ಪದಿಂದ ಮಾಸ್ತರ ಪಾಷಾಸಾಬ ಯಾತಗೇರಿ ಸಾ|| ಬೆಟಗೇರಿ ಇವರು ತಮ್ಮ ಮಿತ್ರರೊಂದಿಗೆ ಶ್ರೀ ಶಿವಶರಣ ಸೇವಾ ನಾಟ್ಯಸಂಘವನ್ನು ಕಟ್ಟಿಕೊಂಡು ಅತೀ ಪ್ರಯಾಸಪಟ್ಟು ಗದುಗಿನ ರಂಗಭೂಮಿಯ ಮೇಲೆ ಶ್ರೀ ನೀಲಗುಂದ ಅಜ್ಜನವರ ಘನಆಶೀರ್ವಾದದಿಂದ ಯಶಸ್ಸು ಗಳಿಸಿತು. ಇದನ್ನ ರಂಗಭೂಮಿಗೆ ತಂದ ಶ್ರೀ ಶಿವಶರಣಸೇವಾ ನಾಟ್ಯ ಸಂಘದವರಿಗೂ ಈ ನಾಟಕಕ್ಕೆ ಆಶೀರ್ವ ದಿಸಿದ ನೀಲಗುಂದ ಅಜ್ಜನವರಿಗೂ ನಾನು ಋಣಿಯಾಗಿರುವೆನು. ಇವಲ್ಲದೆ ಇನ್ನೂ ಮೂರು ನಾಟಕಗಳು ರಂಗಭೂಮಿಗೆ ಬರಲಿರುವ **ಅಂಣನಮನೆ, ಬುಡಬುಡಿಕ್ಯಾ, ಯೋಗಿನಿ** ಎಂಬ ಸಾಮಾಜಿಕ ನಾಟಕಗಳು. ಇನ್ನು ನಮ್ಮ ಹಿತಚಿಂತಕರಾಗಿ ನಿಂತು, ಈ ಕೃತಿಗೆ ಮುನ್ನುಡಿಯನ್ನು ಬರೆದು ನನ್ನ ಹರಿಸಿದ. ಪೂಜ್ಯರಾದ "ಪಂಡಿತ ಶ್ರೀಕಂಠಶಾಸ್ತ್ರಿ"ಗಳವರನ್ನು ಸಮಾಸ್ಮರಿಸುವೆ. ಹಾಗೂ ಕೊನೆಯದಾಗಿ ಕನ್ನಡ ಕಲಾಭಿಮಾನಿಗಳ ಪ್ರೋತ್ಸಾಹ ದೊರೆಯದಿ ದ್ದಲ್ಲಿ ಎಲ್ಲವೂ ವ್ಯರ್ಥವಾದೀತು. ಅಂತೆಯೇ ಕನ್ನಡಕಲಾಭಿಮಾನಿಗಳ ವರದ ಹಸ್ತ ನಮ್ಮ ಮೇಲಿರಲೆಂದು ಆಶಿಸುವ.

ಲೇಖಕರು

**ಶ್ರೀಮತಿ ನೀಲಮ್ಮಾ ಶಾಂತಗಿರಿ.**

## ೧ ನೇ ಪ್ರವೇಶ

( ಈಶ್ವರಪ್ಪನ ದಲಾಲ ಅಂಗಡಿ ಗುಮಾಸ್ತ ಲೆಕ್ಕದೊಳಗೆ ಕುಳಿತಿದ್ದಾನೆ. ಮಾಲಕ ಈಶ್ವರಪ್ಪನು ಬಂದು ಸರಸ್ವತಿಗೆ ನಮಿಸಿ ತ್ರಿಜೋರಿಯ ಪಕ್ಕದಲ್ಲಿ ಕೂಡ್ರುವನು )

**ಈಶ್ವರಪ್ಪಾ—** (ಗುಮಾಸ್ತನಿಗೆ) ಪುಟ್ಟ್ಯಾ ನಿನ್ನಿನ ದಿವಸ ವಿಕ್ರಿ ಆದ ಮಾಲಿನ ಪಟ್ಟಿಗಳನ್ನೆಲ್ಲಾ ಮುಗಿಸಿದಿಯಾ—-

**ಪುಟ್ಟ್ಯಾ—** ಸಾಹುಕಾರರೇ, ಯಾವತ್ತು ಪಟ್ಟಿಗಳನ್ನು ಮುಗಿಸಿರುವೆ ಮತ್ತು ಈ ದಿನದ ಪ್ರಾರಂಭದ ಶಿಲ್ಕು ಇಹು ಇದಕ್ಕೆ ಸಹಿಮಾಡಿರಿ—

( ಲೆಕ್ಕ ನೋಡುತ್ತಾ )

**ಈಶ್ವರಪ್ಪಾ—** ಪುಟ್ಟ್ಯಾ ಹತ್ತಿಯ ಬೆಲೆಯು ದಿನೇ=ದಿನೇ ಹೀಗೆ ಯೇರಿಳಿತವಾಗಿದ ಈ ವ್ಯವಹಾರ ಎಂದು ನಿಮಿತಕ್ಕೆ ಬಂದು ನಿಲ್ಲದೆ ನಮಗೆ ವುಳಿಗಾಲವಿಲ್ಲಾ ಸಟ್ಟಾ ಹತ್ತಿಯಿಂದ ಲಾಭ ಹತ್ತಲು ಕ್ಷಣ ಕಾಲ ತಢವಿಲಾ ಇಲ್ಲವೇ ಈ ವ್ಯವಹಾರ ನಷ್ಟವಾಯಿತೆಂದರೆ ಮರಣದ ಕುತ್ತೇ ತಿಳಿಯಿತೆನೋ ವುಟ್ಟಾ.

**ಪುಟ್ಟ್ಯಾ—** ನಿಜ ಮಾಲಕರೇ, ಅಂಥರೇನೆ ಸಟ್ಟಾ ವ್ಯಾಪಾರಿಗಳು ಬೆಟ್ಟದಂತಾ ಲಾಟ ಖರೀದಿ ಮಾಡಿ ಬಿಲ್ಲ ತಗಿಸೇ ಬಿಡತಾರೀ ಧಾರಣೀ ಡಲ್ಲ ಆಯಿತೆಂದರೆ ಸಲ್ಲು ಮಾಡದೆ ಕೈಲಾಸದ ಬಿಲ್ಲು ತಗಿಸೇ ಬಿಡತಾರ, ಇಲ್ಲವೇ ತುಪ್ಪದ ದೀವಿಗೆಯನ್ನು ಹಚ್ಚಿಕೊಂಡು ತೆಪ್ಪದ ತೇರಿನಂತೆ ಮಹಾ ಸಾಗರದಲ್ಲಿ ಲೀನವಾಗಿ ಬಿಡತಾರೀ ಯಜಮಾನರೇ ಹೇಗಾದರೂ ಮಾಡಿ ಧೈರ್ಯಾ ಮಾಡಿ ಕೊಳ್ಳಿರಿ.

**ಈಶ್ವರಪ್ಪಾ—** ಆಗಲಾಗಲಿ ನೋಡೋಣ ದೇವರು ಮಾಡಿದಂತೆ ಆಗಲಿ ಬಾರದು ಬೊಪ್ಪದು ಬೊಪ್ಪದು ತಪ್ಪದು ಅಂತಾ ಮುಟ್ಟ್ಯಾ ಸ್ವಸಾಟಿಗೆ ಹೋಗಿ ಅಲ್ಲಿಯ ವಾರ್ತೆ ತಿಳಿದುಕೊಂಡ ಬಾ.

**ಪುಟ್ಟ್ಯಾ—** ಆಗಲಿ ಯಜಮಾನರೇ ಹೋಗಿ ಬರತೇನ್ರಿ.

( ಪುಟ್ಟು ಹೋದ ನಂತರ ರಂಗಪ್ಪನ ಪ್ರವೇಶ )

**ರಂಗಪ್ಪಾ**— ನಮುಸ್ಕಾರೀ ಧನೇರ ನಮುಸ್ಕಾರ.

**ಈಶ್ವರಪ್ಪಾ**— ಓಹೋ ಓಹೋ ನಮುಸ್ಕಾರ ನಮುಸ್ಕಾರ ಬಾ ರಂಗಣ್ಣಾ ಕುಳಿತುಕೋ (ಕುಳಿತು ನೋಡಿ) ಯ್ಯಾವಾಗ ಬರೋಣವಾ ಯಿತು ರಂಗಪ್ಪಾ.

**ರಂಗಪ್ಪಾ**— ಧನೇರ ಬೆಳ್ಳಿ ಚಿಕ್ಕೀ ಮೂಡಾಕ ವುರು ಬಿಟ್ಟನಿ ಮತ್ತೇನ್ರಿ ಸಾವುಕಾರ ಹತ್ತೀ ಧಾರಣಿ.

**ಈಶ್ವರಪ್ಪಾ**— ರಂಗಪ್ಪಾ ನಿನ್ನೆ ವಂದು ಧಾರಣಿ, ವೊನ್ನೆ ಒಂದ್ರು ಧಾರಣಿ ಯಾವ ಮಾಲಿನ ಧಾರಣಿಯೂ ನಿಯಮಿತವಿಲ್ಲಾ.

**ರಂಗಪ್ಪಾ**— ಯಪ್ಪಾ ದಿನಾ ನೂರಾಯಂಟು ಧಾರಣಿ ಆದರೆ ನಮ್ಮಂಥಾ ಬಡವರ ಆದರ ಪಾಡೇನ್ರಿ....

**ಈಶ್ವರಪ್ಪಾ**— ಏನೋ ನೋಡು ರಂಗಣ್ಣಾ ಬಜಾರ ಇದ್ದಂತೆ ಹೋಗೋದು ಈಗಿನ ವ್ಯಾಪಾರ, ಈಗಿನ ಕಾಲಮಾನವೇ ಅತಿ ಸೂಕ್ಷ್ಮವಾಗುತ್ತವೆಂದ ಮೇಲೆ ಕಾಲಚಕ್ರ ಉರಿಳಿದಂತೆ ನಾವೂ ವುರಳಬೇಕಲ್ಲಾ, ರಂಗಣ್ಣಾ ಹೊತ್ತು ಬಂದಂತೆ ಕೊಡೆ ಹಿಡಿಯಬೇಕಲ್ಲಾ, ಅದೆಲ್ಲವೂ ಆ ಪರಮಾತ್ಮನ ಇಚ್ಛೆ.

**ರಂಗಪ್ಪಾ**— ಅದೆಲ್ಲಾ ಖರೇರಿ ಇವತ್ತು ಹತ್ತಿ ಧಾರಣಿ ಹ್ಯಾಂಗ ಐತ್ರಿ.

**ಈಶ್ವರಪ್ಪಾ**— ರಂಗಪ್ಪಾ, ಹತ್ತಿ ಇದ್ದ ಹಾಗೆ ಧಾರಣಿ ಯರುತ್ತದೆ ಆದರಲ್ಲಿ ಎರಡನೇ ನಂಬರ ಮೂರನೇ ನಂಬರ ಹತ್ತಿ ಧಾರಣಿ ಕಡಿಮೆ ಇರ್ರುತ್ತದೆ.

**ರಂಗಪ್ಪಾ**— ಎಪ್ಪಾ ಸಾವಕಾರ, ಹತ್ತಿಗೂ ನಂಬರ ಇರತದಯೇನ್ರಿ ಆದು ಹ್ಯಾಂಗ್ರಿಯಪ್ಪಾ, ಇದೆಲ್ಲಾ ಹೊಸ ಮಾತನೋಡ್ರಿ.

**ಈಶ್ವರಪ್ಪಾ**— ಇದೋ ಕೇಳು ರಂಗಪ್ಪಾ, ಈಗ ಸರಕಾರದವರು ಅಗ್ರಿಕಲ್ಚರ ಸಂಸ್ಥೆ ಅಂತಾ ಒಕ್ಕಲಿಗರ ಸಲುವಾಗಿಯೇ ಸ್ಥಾಪಿಸಿರುವರು, ಅವರು

ಸರಿಯಾಗಿ ಭೂಮಿಗೆ ಹದಮಾಡ್ಸಿ ಅದಕ್ಕೆ ಬೀಜವ ಗೊಬ್ಬರ ಹಾಕಿಸಿ ಸಕಾಲಕ್ಕೆ ಅನೇಕ ಸಲಕರಣೆಗಳಿಂದಾ ಕೆಲವು ಪದ್ಧತಿಯಿಂದಾ ಪ್ರಯೋಗ ಮಾಡಿ ಹತ್ತಿ ಬೆಳೆಸುತ್ತಾರೆ. ಆ ಬೆಳೆದ ಹತ್ತಿಗೆ ಒಂದನೇ ನಂಬರ ಮಾಲು ಅಂತಾ ನೇಮಿಸಲ್ಪಡುತ್ತಾರೆ. ರಂಗಪ್ಪಾ ನಿಮ್ಮ ಮಾಲು ಅದಕ್ಕೆ ಹೋಲಿಕೆಯಾದರೆ ಮತ್ತು ಆ ಮಾಲಿನ ಸರಿಯಾಗಿ ಉತಾರ ಬಂದರೆ, ಅದೇ ಯೋಗ್ಯ ಧಾರಣಿ ನಿಮ್ಮ ಮಾಲು ಕಾಣುತ್ತದೆ. ಇಲ್ಲವಾದರೆ ಹತ್ತಿಯು ಕೆಳವುಟ್ಟದ್ದಾಗಿ ಧಾರಣಿ ಕಡಿಮೆ ಆಗುತ್ತದೆ.

**ರಂಗಪ್ಪಾ**— ಅಲ್ರೀ, ನಮ್ಮದೂ ಒಂದನೇ ನಂಬರ ಮಾಡಿಸಿ ಬಿಡಿತೆ ಆದರೆ ಹತ್ತು ಕರ್ಚು ನಾ ಕೊಡತೇನ್ರಿ.

**ಈಶ್ವರಪ್ಪಾ**— ಹುಚ್ಚಾ ಹಾಗೆಲ್ಲಾ ಮಾಡಿಸಲು ಅದೇನು ಹುಣಸೇ ಹಣ್ಣಿನ ವ್ಯಾಪಾರ ಅಂತಾ ಮಾಡಿಯೇನು, ರಂಗಪ್ಪಾ ನೀನು ಈ ಸಲಾ ಅದ್ರೆ ಸಂಸ್ಥೆಯಿಂದಾ ಬೀಜವನ್ನೂ ಗೊಬ್ಬರವನ್ನೂ ಹಾಕಿಸಿ ಅವರ ಹೇಳಿಕೆಯಂ ಬದಕು ಮಾಡ್ರಿ. ಹತ್ತಿಯನ್ನು ಬೆಳೆಸು ಅಂದರೆ ನಿನ್ನ ಮಾಲೂ ಯೋಗ್ಯ ಧಾರಣಿ ಕಾಣುತ್ತದೆ.

**ರಂಗಪ್ಪಾ**— ಎಪ್ಪಾ ಅದೆಲ್ಲಾ ನಮಗ ಹ್ಯಾಂಗ ಗೊತ್ತಾಗಬೇಕ್ರಿ, ನೀವ ಸ್ವಲ್ಪ ತಿಳಿಸಿಹೇಳ್ರಿ—

**ಈಶ್ವರಪ್ಪಾ**— ನೋಡು ರಂಗಂಣಾ, ನಿಮ್ಮೂರ ಗೌಡರು ಒಕ್ಕಲ ತನದ ಖಾತೆಯವರಿಂದಾ ಎಲ್ಲವನ್ನೂ ಮಾಡಿಸುತ್ತಾರೆ. ಅವರನ್ನೇ ಕೇಳಿ ಅವರಿಂದಾ ಎಲ್ಲ ಸಹಾಯವನ್ನು ಪಡೆದುಕೋ ತಿಳಿಯಿತೆ, ಹಾಂ, ಇರಲಿ ರಂಗಣ್ಣಾ ನಿನ್ನ ಮಗನು ಈ ಸಲಾ ಮುಲ್ಕೀ ಪರೀಕ್ಷೆ ಪಾಸಾದನಂತಲ್ಲಾ ಮುಂದೆ ಅವನನ್ನು ನಮ್ಮೂರಿಗೆ ಇಂಗ್ಲೀಷ ಕಲಿಯಲಿಕ್ಕೆ ಕಳಿಸಿ ಕೊಡಬೇಕೋ ಮತ್ತೆ,

**ರಂಗಪ್ಪಾ**— ಮತ್ತೇನ್ರಿ ಎಪ್ಪಾ ಮಗನ ಸಾಲೀ ಕಲಿಸಿ ಪಿರುತಿ ನೋಡುವಾಕಿ ನನ್ನ ಹೇಣ್ತಿ ಈ ವರ್ಷ ಸತ್ತು ಹೋದಳ್ರಿ. ಅವಳ ಜಡ್ಡಿಗೆ ಬಹಳ ಹಾಳಾಗಿನ್ರಿ ಅದ ಸಾಲಾನ ಹೊರಲಾರದಾಂಗ ಇದ್ದಾಗ ಇನ್ನೆಲ್ಲಿ ಸಾಲಿರಿ ಈ ಶಹರದಾಗ ಮನಿ ಮಾಡಿ ಮಗನ ಇಟ್ಟು ಸಾಲೀ ಕರ್ಚು ಕೊಟ್ಟೇ ಕಲಿಸು ಯೋಗ್ಯತಾ ಇಲ್ರಿ ಅದಕ ಯಾರದರ ಮನ್ಯಾಗ ದುಡ್ಯಾಕ ಇಡಬೇಕು ಅಂತಾ.

**ಈಶ್ವರಪ್ಪಾ**— ಛೇ, ಛೇ, ಹಾಗೆಲ್ಲಾ ಮಾಡಬೇಡಾ ನಿನ್ನ ಮಗನು ಬಹಳ ಹುಷಾರಿ ಇರುವನಂತೆ, ಇಂಥ ಕಲಿಯುವ ವಯಸ್ಸಿನಲ್ಲಿ ಹುಡುಗನ ಜೀವನವನ್ನು ಹಾಳು ಮಾಡಬೇಡಾ ನಮ್ಮ ಭಾರತ ಸರಕಾರ ಶಿಕ್ಷಣಕ್ಕೆ ಬಹಳ ಮಹತ್ವ ಕೊಟ್ಟಿದೆಂಬುದನ್ನು ತಿಳಿದೂ ತಿಳಿದು ವಿದ್ಯದ ಹೆದ್ದಾರಿಯನ್ನೇ ಮುರಿಯುವದು ನಿಮ್ಮಂಥಾ ವಕ್ಕ ಅಗರ ದಡ್ಡತನಾ.

**ರಂಗಪ್ಪಾ**— ಹೌದ್ರಿ, ಆದೆಲ್ಲಾ ಖರೇರ್ರಿ ಸಾಲೀ ಕಲಿಸಲಿಕ್ಕೆ ಗುಡ್ಡ ದ್ಹಾಂಗ ರೊಕ್ಕ ಬೇಕಲ್ರಿ—

**ಈಶ್ವರಪ್ಪಾ**— ರಂಗಪ್ಪಾ ನಮ್ಮೂರಲ್ಲಿ ಅನೇಕ ಜನ ಶ್ರೀಮಂತರಿದ್ದಾರೆ ವಾರದ ಮನೆಯೋ ಅಥವಾ ಬೋರ್ಡಿಂಗೋ ಯೇನಾದರೂ ಮಾಡಿ ವ್ಯವಸ್ಥೆ ಮಾಡಿಸು ಏನೋ ನಿನ್ನ ಮಗನು ಅಷ್ಟು ವಿದ್ಯಾವಂತನಾದರೆ ಆಗಲಾದರೂ ನಿನ್ನ ಕಷ್ಟ ದೂರಾಗಬಹುದು.

**ರಂಗಪ್ಪಾ**— ಎಪ್ಪಾ ನೀವ ನನ್ನ ಪಾಲಿಗೆ ತಂದೆ ಇದ್ದಂತೆ ನನ್ನ ಮಗ ನನ್ನ ನಿಮ್ಮ ಮಗಾ ಅಂತಾ ನಿಮ್ಮ ಉಡಿಯಲ್ಲಿ ಹಾಕುವೆ ಎನರ ಮಾಡಿ ಅವನಿಗೆ ಸಾಲಿ ಕಲಿಸಿ ಅವನ್ನ ಅನ್ನದ ಮಾರ್ಗಕ್ಕ ಹಚ್ಚಿದರ ಸಾಯುತನಾ ನಿಮ್ಮ ಹೆಸರು ಹೇಳತೀನ್ರಿ ಯಪ್ಪಾ ಪುಣ್ಯಾ ಕಟಿಗೋಳ್ರಿ.

**ಈಶ್ವರಪ್ಪಾ**— ಆಗಲಾಗಲಿ ಚಿಂತಿಸದಿರು ಬಡಮಕ್ಕಳ ಸಲುವಾಗಿ ಸಹಾಯ ಮಾಡಿ ಶಿಕ್ಷಣಕ್ಕೆ ದಾರಿ ಮಾಡಿಕೊಡುವದೇ ನಮ್ಮಂಥವರ ಕರ್ತವ್ಯ ರಂಗಪ್ಪಾ ನೀನು ಇನ್ನೊಂದು ಸಲ ಬರುವಾಗ್ಗೆ ನಿನ್ನ ಮಗನನ್ನು ಕರೆದು ಕೊಂಡು ಬಾ ನಾನೆಲ್ಲ ವ್ಯವಸ್ಥೆ ಮಾಡುವೆ.

**ರಂಗಪ್ಪಾ**— (ಕೈ ಮುಗಿಯುತ್ತಾ) ಹಂಗ ಆಗಲ್ರೀಯಪ್ಪಾ, ನನ್ನ ಮಗನ ಪಾಲಿಗೆ ನೀವೇ ದೇವರು, ಬತ್ತಿ ಹೋದ ನನ್ನಾಸೆ ಮತ್ತೆ ಹಸುರಾಯಿತು ನಾಳೆಯೇ ಕರೆದುಕೊಂಡು ಬರತೇನ್ರಿ ನಮಸ್ಕಾರ ಹೋಗಿ ಬರತೀನ್ರಿ

**ಈಶ್ವರಪ್ಪಾ**— ನಮಸ್ಕಾರ ಹೋಗಿ ಬಾ ಬರುವಾಗ್ಯೆ ಕರೆದುಕೊಂಡು ಬಾ.

## ೨ ನೇ ಪ್ರವೇಶ

(ಸಂಗನು ಗಡಬಿಡಿಯಿಂದಾ ಹೊರಟಿರುವನು ಹಿಂದಿನಿಂದ ನಿಂಗಿಯು ಬಂದು)

**ನಿಂಗಿ**— ಯೇ, ಯೇ, ಯೇ,.... ನಿಲ್ಲ ಹಂಗ ಹೊಂಟಿ ಬಿಟ್ಟಿಲ್ಲಾ

**ಸಂಗ**—(ತಿರುಗಿ ನೋಡಿ) ಯಾಕ ಕಚೇರಿ ಕೆಲ್ಸಾ ಹರಕತ ಆಗಿತ್ತೇನ

**ನಿಂಗಿ**— ಅಲ್ಲಾ ನೋಡಿದ್ಯಾ.

**ಸಂಗ**— ಯಲ್ಲೈತಿ ಯೇನ ನೋಡ್ಲಿ

**ನಿಂಗಿ**— ಆ ರಂಗಪ್ಪನ ಗೋಳಾಟನ

**ಸಂಗ** ಯೇನಾತ ಅವನ ಗೋಳಾಟ

**ನಿಂಗಿ**— ಯೇನಿಲ್ಲಾ ಅವನ ಹೇಣ್ತಿ ಸತ್ತ ಹೋದ್ಲು ಸಂಣ ಮಗನ ಕಟಗೊಂಡು ತಾನ ಕೈ ಬಾಯಿಸು ಟಗೊಂಡ ಗೋಳ್ಯಾಡ ತಾನ ಕಲಿಯು ಮಗನ ಸಾಲೀ ಬಿಡಿಸಿ ದನಾ ಕಾಯಕ ಹಚ್ಚಾನ ಅದನ್ನ ಕಂಡ್ರು ನನ್ನ ಜೀವಾ ಮರಾ ಮರಾ ಅಂತಾ ಮರಗತ್ತ ನೋಡ

**ಸಂಗ**— ನಿಂಗಿ ಹೆಣ್ತಿ ಸತ್ತವರ ಬಾಳೇ ಆಗೂದ ಹೀಂಗ ನೀನು ಎಲ್ಲ ತಿಳಿದಕೀನ ಅದೀದಿ ಈಟ ಚಂದಾಗಿ ಬಾಳೆ ಮಾಡಕೊಂಡ ಹೋದರಾತು ನಮ ಗ್ಯಾಕ ಬೇಕು ಮಂದಿ ಪುರಾಣ.

**ನಿಂಗಿ**— ಯೇ ಯೇ ಪುರಾಣದವನ ನಿನಗೇನಾದರೇನು ನಮಗೂ ಮಕ್ಕಳಿದ್ದರ ತಿಳಿತಿತ್ತು ನೀಯಲ್ಲಾ ಹೀಂಗ ಜಗಳಾಡುದು. ಇದ್ದರ ಏನ ನೀಲಿ ಕಲಿಸಿ ಸ್ಯಾಣಾನ್ನ ಮಾಡೂದು ಅಟರಾಗ ಇತ್ತು.

**ಸಂಗ**— ಅಲ್ಲ ನಿಂಗಿ ನಾನ ವಂದನೆಯತ್ತಾ ಒಂಬತ್ತು ವರ್ಷ ಕಲಿ ತಿನಿ ಅಂದ ಬಳಿಕ ನಾಯೇನ ಅವಂಗ ಸಾಲಿ ಕಲಿಸಿ ಸಾ ಬನ್ನ ಮಾಡತಿದ್ದಿಲ್ಲಾ ಅವಂಗ ಸಾವಕಾರ ಆಗು ದಂದೆ ಒಂದು ಬ್ಯಾರೇ ಕಲಿಸ್ತಿದ್ದೆ.

**ನಿಂಗಿ**— ಅಯ್ಯ ಗಂಡಸ ನೀನ ಇಷ್ಟ ಸ್ಯಾನಾ ಆದೀದಿ ಅಂದಿಂದ ತೀರತ ಅಲ್ಲಾ ಯೇನ ಅಂದೆಲ್ಲಾ ಸಾವುಕಾರ ಆಗುದು ಕಲಿಸ್ತೀನಿ ಅಂದೆಲ್ಲಾ ಅದು ಯಾವದ ಕೆಲ್ಸಾ.

**ಸಂಗ**— ಯೇ ಯೇ ಹಳ್ಳೀ ಮಳ್ಳೀ ನಿನಗ್ಯಾಂಗ ಗೊತ್ತಾಗಬೇಕು. ಈ ಪ್ಯಾಟಿ ಉದ್ಯೋಗ ಕೇಳಿಲ್ಲೆ ಕನ್ನಾ ಹೊಡಿಯುದು ನತ್ತ ಕತ್ತರಸುದು ಪಾಕೀಟ ಹೊಡಿಯುದು ರೊಕ್ಕದಾಟಾ ಆಡೂದು ಮತ್ತ ಬಟ್ಟೀ ಶೆರೆ ಮಾರೂದೂ ಇಂಥಾ ಕೆಲ್ಸಾ ಯಾರ ಮಾಡತಾರ ಅವರಿಗೆ ಮರ್ಯಾದಿನೂ ಬಹಳ ಈ ಪ್ಯಾಟ್ಯಾಗ ತಿಳಿತ—

**ನಿಂಗಿ**— ತಿಳಿತ ಬಿಡಪ್ಯಾಟಿ ಗಂಡಸ ತಿಳೀತ ಬಿಡು ಚಲೋ ಹಾದಿಸ ಹಿಡಿಸಿದ್ದಿನೀ ಇಂಥ ಕೈಲಾಗದ ಮುಗ್ಗಲಗೇಡಿ ಆದೀ ಅಂತಾ ದೇವರು ನಮುಗ ಮಕ್ಕಳ ಕೊಟ್ಟಿಲ್ಲಾ.

**ಸಂಗ**— ಕರೆ ಅಯಿತಿ ಕರೇ, ಯೇ ನಿಂಗಿ ಅವಯೇನ ಕೊಡತಾನ ನಾನ ಮನಸಿನ ಮ್ಯಾಲಿ ತಗೊಂಡಿಲ್ಲಾ ಅನ್ನು ತಗೋಬಾರದ ನಾ ಮನಸಿನ ಮ್ಯಾಲಿ ತಗೊಂಡ್ಯಾ ಅಂದ್ರ ಆವಾಗ ಗೊತ್ತಾಕ್ಕೈತಿ ಈ ಮುಗ್ಗಲಗೇಡಿ ಗದ್ಲಾ ಇಷ್ಟ್ಯೋಳಕಿ ನೀನರ ಹಠಕ ಬಿದ್ದ ಹಡಿಬಾರದ ಗಡಾನ.

**ನಿಂಗಿ**— ನನ್ನ ಕೈಯ್ಯಾಗ ಯೇನೈತಿ ಅದೆಲ್ಲಾ ಪರಮಾತ್ಮನ ಆಟಾ ಅವಾ ಕಣ್ಣು ತಗದರ ನೋಡು ಮಕ್ಕಳು ಮನಿತುಂಬಾ.

**ಸಂಗ**— ಏ ಮಳ್ಳ ದೇವರು ಕಂಣ ತಗದರ ಆಗೂದಿಲ್ಲಾ ಮೊದಲ ನೀ ಕಂಣ ತಗೀ ನೀಯಲ್ಲೆ ಮಬ್ಬ ಆದೀದಿ ಹಗಲೆಲ್ಲಾ ನಿದ್ದಿ ಹೊಡಿಯುದು ಮ್ಯಾಲೆ ಮಕ್ಕಳ ಬೇಡೂದು ಬಾಬಾ ಆಗೂ ಕಾಲಕ್ಕ ಆಗೇ ಆಗತಾವು ಯಾಕ ಚಿಟಬರಸತೀದಿ,

**ನಿಂಗಿ**— ಬೇಸ ಕಲ್ತಿಯೇಳ ಚಾಳೀಸ ಗಂಡಸದಿದೀ ವಟ ತಿಳದ ಮಾತಾಡು ಯಲ್ಲಾ ಬಟಾಬಯಲ ಮಾಡಬ್ಯಾಡಾ ಕೇಳವವರು ನಕ್ಕಾರು ನಮ್ಮ ಬಾಳೇಕ ಬಾ ಬಾ ಹೋಗುನು (ವಿಚಾರಿಸಿ) ಅಯ್ಯ ಅಲ್ರಿ ನಿಮ್ಮ ಗೊಂದು ಹೇಳೂದ ಮರತಿದ್ದಿನ್ರಿ.

**ಸಂಗ**— ಮತ್ತೇನ್ರಿ ಹೇಳೂದು ಎಲ್ಲಾ ಮುಗಿಸೆಬಡ್ರಿ.

**ನಿಂಗಿ**— ಅಡ್ನೂರಾಗೇನ ದೇವರೇಳುವಾಕಿ ಅದಾಳಂತ ಆಕಿ ಹತ್ತರ ಹೋದರ ನಮ್ಮ ಹಣೇಬಾರದಾಗ ತೊಟ್ಟಿಲಾ ಅದವಾ ಇಲ್ಲೋ ಅಂತಾ

ಎಲ್ಲಾ ಹೇಳಿ ತಾಯತಾ ಕಟ್ಟಿ ಮಂತ್ರಸ್ತಾಳಂತ. ಅದಕ ಇಬ್ಬರೂ ಹೋಗೂನ.

**ಸಂಗಾ**— ಪಾಡ ಹುಡುಕಿದೇಳ ಆಸಾಮಿನ ಅಲ್ರೀ ಹೆಂಣು ಮಕ್ಕಳು ಇಂಥಾ ಸುದ್ದಿ ಸರಗ್ನ ಗೊತ್ತಾಗಿರತಾವ ನೋಡ್ರಿ ಅಲ್ಲಾ ಆಕಿ ದೇವರು ಹೇಳುಮುಗಳಾಗಿದ್ದರ ನಯಾಪೈಸಾಕ ಬಾಯಿ ತಗದು ದೆವ್ವನಾಂಗ ಮನಸ್ಯಾರಗೆ ಯಾಕ ಹಲಬತಿದ್ಲು ಇದೆಲ್ಲಾ ಹೊಟ್ಟಿ ತುಂಬಿಸುಕೊಳ್ಳುಸೋಗು ಮೊದಲು ಆಕಿಗೆ ಮಕ್ಕಳ ಅದಾವ ಇಲ್ಲ ಕೇಳೂನ ಜರ ಇರದಿದ್ದರ ನಾ ಮಂತ್ರಿಸಿ ತಾಯತಾ ಕಟ್ಟಿದೆ ಅಂದ್ರು ಆರು ತಿಂಗಳಗೊಂದು ಸೂಲಾ ಆಡು ಇದಂಗ ಹಂಗ ಹಡಿಯೂದ ಹಡಿಯೂದ.

**ನಿಂಗಿ**— ಯೇ ಹಿರಿಯಾ ಹಂಗಲ್ಲಾ ದೇವರೇಳಿದವರಿಗೆ ಅನಬ್ಯಾರದು ದೆವ್ವಾಗಿ ಬಡಕೊಂಡಾಳು

**ಸಂಗ**— ಏ ದೇವರೇಳಕಿ ಭಕ್ತಳ ಮಗಳ, ಮುಗಸ ನಿನ್ನ ಪುರಾಣ ನಡಿ ನಡಿ ಸಾವುಕಾರ ಈಶ್ವರಪ್ಪನವರು ಸಿಟ್ಟಿಗಿಟ್ಟಿದ್ದಾರು ಹೋಗೂನು ನಡಿ.

**ನಿಂಗಿ**— ಅಲ್ರಿ ಮತ್ತ ಹೋಗೂನು ನಡಿ. ನ್ಯಾ ದೇವರಿಗೆ

**ಸಂಗ**— ಆಗಲಿ ನಡಿ ಮಹಾರಾಯುಳೇ ಮಕ್ಕಳ ಹುಚ್ಚರ ತಪ್ಪಲಿ.

— ನಿಂಗೀ ಪದಾ —

ನಾವು ಹೋಗೂನು ಮೈಲಾರಲಿಂಗಕ
ಮಕ್ಕಳ ಬೇಡುದಕ ನಾವು ಹೋಗೂನ.
ನಾನು ನೀನು ಕೂಡಿಕೊಂಡು
ದೇವರಿಗೋಗೂನ ಮುತ್ತಿನಂತ
ಮಕ್ಕಳ ಬೇಡಿ ಮನೆಗೆ ಬರುಣ ಜೋಗಳ ಹಾಡುನ ನಾವು

———

## ೩ ನೇ ಪ್ರವೇಶ

(ಈಶ್ವರಪ್ಪನ ಮನೆ ಫಲ್ಲಂಗದ ಮೇಲೆ ಈಶ್ವರಪ್ಪನು ನರಳುತ್ತಾ ಮಲಗಿರುವನು ಒಳಗಿಂದಾ ಗೌರಾ ಕಾಫಿ ತರುವಳು)

**ಗೌರಾ**— ಏಳಿ ಮೊದಲು ಕಾಫಿ ಕುಡಿಯಿರಿ.

**ಈಶ್ವರಪ್ಪಾ**— (ನರಳುತ್ತ ಎದ್ದು) ಕಾಫಿ ತಂದಿರುವಿಯಾ (ಕಾಫಿ ಕುಡಿಯುತ್ತಾ) ಶಿವ ಶಿವಾ ಅಂಗಡಿಗೆ ಹೋಗಬೇಕೂ ಅಂತಾ ಮನಸ್ಸು ಚಟ ಪಡಿಸುತ್ತಿರುವದು. ಆದರೆ ಏನು ಮಾಡುವದು ತಲೆಶೂಲೆ ಬಹಳವಾಗಿದೆ.

**ಗೌರಾ**— ಯಜಮಾನರೇ ಈ ದಿನ ಅಂಗಡಿಗೆ ಹೋಗಬೇಡರಿ. ಒಂದು ದಿನವಾದರೂ ಅರಾಮು ತೆಗೆದುಕೊಂಡಲ್ಲಿ ಎಷ್ಟೋ ಕಡಿಮೆಯಾಗುತ್ತಿದೆ. ಗುಮಾಸ್ತನಿಗೆ ಹೇಳಿ ಔಷಧವನ್ನಾದರೂ ತರಿಸೋಣವೇ

**ಈಶ್ವರಪ್ಪಾ**— ಗೌರಾ ಇಷ್ಟಕ್ಕೇನೆ ಔಷಧವೇ ಸ್ವಲ್ಪ ಅಮೃತಾಂಜನವನ್ನು ಹಚ್ಚಿದರೆ ತಾನೇ ಕಡಿಮೆ ಆಗುತ್ತೆ.

**ಗೌರಾ**— ಹಾಗಾದರೆ ಹಚ್ಚಲ್ಯಾ—

( ಅಷ್ಟರಲ್ಲಿ ಒಬ್ಬ ವಕ್ಕಲಿಗನು ಬರುವನು )

**ಚನ್ನಪ್ಪಾ**— ಅಪ್ಪಾ ಅವರೇ ಅಪ್ಪಾ ಅವರೇ

**ಈಶ್ವರಪ್ಪಾ**— ಯಾರವರು ಒಳಗೆ ಬನ್ನಿ.

**ಚನ್ನಪ್ಪಾ**— ನಮಸ್ಕಾರ ಎಪ್ಪಾ ನಮಸ್ಕಾರ ಯಾಕ್ರೀಯಪ್ಪಾ ಮಲಗೀರಲ್ಲಾ ಮೈಯಲ್ಲಿ ನೆಟ್ಟಗಿಲ್ಲೇನ್ರಿ.

**ಗೌರಾ**— ಅವರಿಗೆ ಈ ದಿನ ತಲೆಶೂಲಿಯಾಗಿ ಸ್ವಲ್ಪ ಜ್ವರ ಬಂದಿರುವವಪ್ಪಾ.

**ಈಶ್ವರಪ್ಪಾ**— (ನಿದಾನವಾಗಿ) ಯಾಕೆ ಚನ್ನಪ್ಪಾ ನೀನು ಬಂದಿರುವಿ

**ಚನ್ನಪ್ಪಾ**— ಯಪ್ಪಾ ಮಗಳಿಗೆ ಶೀರಿ ಮಾಡೂದು ಬಂದೈತಿ. ಕೆಯ್ಯಾಗ ಒಂದು ಬಿಲ್ಲಿ ಇಲ್ರಿ ಹ್ಯಾಂಗರ ಮಾಡಿ ಒಂದನೂರು ರೂಪಾಯಿ ಕೊಡ್ರಿ ಪೀಕು ಬಂದ ಕೂಡಲೆ ಗುಲ್ಲಾ ಮಾಲು ನಿಮ್ಮ ಅಂಗಡಿಗೆ ಕಳಸ್ತೀನ್ರಿ.

**ಈಶ್ವರಪ್ಪಾ**— ಚನ್ನಪ್ಪಾ ರೂಪಾಯಿ ವಯ್ಯು ಮುಂದೆ ಹೀಗೆ ಹೇಳತ್ತೀರಿ ಮಾಲು ಬಂದೊಡನೆ ಬೇರೆಯವರ ಅಂಗಡಿಗೆ ಕಳುಹಿ ಮುಖವನು ಸಹಾ ತಪ್ಪಿಸಿ ಬಿಡುತ್ತೀರಿ ಹೇಗೆ ಕೊಡಬೇಕು.

**ಈಶ್ವರಪ್ಪಾ**— ದ್ಯಾಮಪ್ಪಾ ನಿಮಗೆ ಸ್ವಲ್ಪಾದರೂ ಬುದ್ಧಿ ಇದೆಯೋ ಯಲ್ಲಾ ಮನಿಯಲ್ಲೇ ಇರುತ್ತದೇನು ನಿಮ್ಮೆಲ್ಲರ ಕಾಟಕ್ಕೆ ನಮಗೆ ಶೀಕು ಬಂದಿದೆ ಶೀಕು ಹಾಳಾಗಿ ಹೋಗಿರಿ ಇನ್ನೊಮ್ಮೆ ಮನೆಗೆ ಕಾಲಿಟ್ಟದ್ದಾದರೆ ನಿನ್ನ ಗತಿ ನೆಟ್ಟಗಾಗಲಿಕ್ಕಿಲ್ಲಾ ಹುಂ ಹೊರಡು ಹೊರಗೆ.

**ದ್ಯಾಮಪ್ಪಾ**— ಅಂಗಡಿಗೆ ಹೋಗಿ ಕಾರಕನಪ್ಪ ಕೇಳಿದರ ಸಾವುಕಾರ ಬಂದಿಲ್ಲಾ ಅಂದ್ರ ಅದಕ ಇಲ್ಲಿಗೆ ಬಂದರೆ ನೀವು ನೋಡಿದರ ಹೊರಗೆ ಹೋಗು ಅಂತೀರಿ ಹೀಂಗಂದರ ನಮ್ಮಂಥಾ ಬಡ ವಕ್ಕಲಿಗರ ಗತಿಯೇನ್ರಿ.

**ಈಶ್ವರಪ್ಪಾ**— ಯೇ ಯೇಕೆ ವದರುವಿ ಅಂಗಡಿಗೆ ನಡೆ ನಾನು ಬರುತ್ತೇನೆ.

( ಅವನು ಹೋದ ನಂತರ )

**ಗೌರಾ**— ಯಜಮಾನರೇ ನೀವೇ ಕುಳಿತು ಹೀಗೆ ಅಸಾಯಿಗಳ ಮೇಲೆ ಸಿಟ್ಟಿಗೇಳಬೇಕೆ ನಮ್ಮ ವುದ್ಧಾರದ ಸಲುವಾಗಿಯೇ ಆ ಬಡ ವಕ್ಕಲಿಗರು ನಮ್ಮ ಅಂಗಡಿಗೆ ಮಾಲು ಹಾಕಿ ಅಂಡಲಿಯುವ ಬಡತನದ ಭವಣೆಯನಷ್ಟೆ ಬಿಡಿಸಿಕೊಳ್ಳುವರು ಇಂಥವರು ನಮ್ಮಿಂದಾ ಬೈಗಳವನ್ನು ತಿನ್ನಬೇಕೇ ಇದು ನಿಮ್ಮ ಧರ್ಮವಲ್ಲಾ.

**ಈಶ್ವರಪ್ಪಾ**— ಅಲ್ಲೇ ಗೌರಾ ಇವರಿಗೆ ಸ್ವಲ್ಪಾದರೂ ಬುದ್ಧಿ ಇದೆಯೋ ಹೆಗಲ ಮೇಲೆ ಕಂಬಳಿಯನ್ನು ಹಾಕಿಕೊಂಡು ಬಾಯಲ್ಲಿ ತಾಂಬೂಲವನ್ನು ತುಂಬಿಕೊಂಡು ಯಲ್ಲಿಗೆ ಹೋಗಬೇಕು ಯಲ್ಲಿಗೆ ಹೋಗಬಾರದು ಯಂದರಿ ಯದೆ ಬಂದೇ ಬಿಡುತ್ತಾರೆ ಈ ಮುಂಡೇ ಮಕ್ಕಳಿಗೆ ಸ್ವಲ್ಪಾದರೂ ಬುದ್ಧಿ ಇದೆಯೋ ನೀನೇ ಹೇಳು.

**ಗೌರಾ**— ಅವರಿಗೆ ಬುದ್ಧಿ ಇದ್ದಿದ್ದರೆ ನಮ್ಮಂಥ ಶ್ರೀಮಂತರು ವುದ್ಧಾರವಾಗುತ್ತಿದ್ದಿಲ್ಲಾ

**ಈಶ್ವರಪ್ಪಾ**— ಯೇನೇ ಈ ಮುಂಡೇ ಮಕ್ಕಳಿಂದಾ ನಮ್ಮ ವುದ್ಧಾರವಾಗುತ್ತಿದಿಯೇ ಇದಾವ ಹುಚ್ಚು ಕಲ್ಪನೆಯು ಹೇಳುನೋಡುವಾ.

**ಗೌರಾ**— ನೋಡಿ ಆರೈತ ಮಳೆ ಚಳಿ ಬಿಸಿಲಿನಲ್ಲಿ ತಮ್ಮ ರಕ್ತ ಸುಡಿಸಿ ತಮ್ಮ ಬೆವರನ್ನು ಭೂಮಿಗೆ ಸುರಿಸಿ ಕಷ್ಟಪಟ್ಟು ದುಡಿದು ಆ ಭೂಮಿತಾಯಿಯ

ಸೇವೆಯನ್ನು ಮನಸಾರೆ ಮಾಡಿ ನಮ್ಮಂಥವರ ಅಂಗಡಿಗಳನ್ನು ಬೆಳವಣಿಗೆ ಮಾಡುತ್ತಾರೆ ಆ ರೈತರು ತಂದ ಮಾಲನ್ನು ಮತ್ತೊಬ್ಬ ವ್ಯಾಪಾರಸ್ಥರಿಗೆ ನೀವು ಕೊಟ್ಟು ಯರಡೂ ಕಡಿಂದಾ ಲಾಭ ತಿಂದು ಹಣಗಳಿಸುವಿರಿ ಆ ಹಣದ ಮದ ವೇ ನಿಮ್ಮನ್ನು ಈ ತೆರನಾದ ಅಹಂಕಾರಕ್ಕೆ ವಯ್ದಿದೆ ನಿಜವಾಗಿ ವಿಚಾರ ಮಾಡಿದರೆ ಆ ರೈತ ದುಡಿದ ಅನ್ನದಿಂದಲೇ ಇಂದು ಜಗತ್ತು ಬಾಳಿ ಬದಕುತ್ತದೆ.

**ಈಶ್ವರಪ್ಪಾ**— ಸಾಕು ಸುಮ್ಮನಿರೇ ಹೆಂಣುಮಗಳಾಗಿ ಯಷ್ಟು ತಿಳು ವಳಿಯು ಮಾತುಗಳನ್ನು ಹೇಳುವಿ ನಿನಗೇತಕ್ಕೆ ಬೇಕು. ರೈತ ದುಡದ್ದೆ ನಾವು ತಿನ್ನುವದು ಇದೆಲ್ಲಾ ನಿನ್ನ ಹುಚ್ಚು ಯಲ್ಲರಿಗೂ ಅನ್ನವನ್ನು ಹಾಕುವ ವವನು ದೇವನಿದ್ದಾನೆ ದೇವಾ

**ಗೌರಾ**— ಇದು ನಿಮ್ಮ ತಪ್ಪು ಕಲ್ಪನೆಯು ಮಳೆ ಬಿದ್ದೊಡನೆ ಬೀಜ ಬಿತ್ತುವವರು ಯಾರು ರೈತನಲ್ಲವೇ ? ರಾತ್ರಿ ಹಗಲನ್ನದೆ ಕಾಡಿನಲ್ಲಿ ಬೆಳೆಯು ನಿರೀಕ್ಷಣೆ ಪೋಷಿಸಿ ಸರ್ವ ವಿಧದಲ್ಲಿ ದುಡಿದು ಅವುಗಳನ್ನು ರಕ್ಷಿಸುವವರ್ರು ಯಾರು ರೈತನಲ್ಲವೇ? ಕಾಗೆ ಗುಬ್ಬಿಗಳು ತಿನ್ನುವದು ಆ ರೈತರ ಅನ್ನವಲ್ಲವೇ? ದಾನಧರ್ಮಗಳನ್ನು ಮಾಡಿ ಉಳಿದ ಮಾಲನ್ನು ತಂದು ನಿಮ್ಮ ಅಂಗಡಿಗೆ ಹಾಕುವವನು ಯಾರು ರೈತನಲ್ಲವೇ? ನಿಜವಾಗಿಯೂ ದೇವರಿಗೆ ಸಹಾ ಅನ್ನ ಹಾಕುತ್ತಾನೆ ಆ ರೈತ.

**ಈಶ್ವರಪ್ಪಾ**— (ನಗುತ್ತಾ) ಯೇನು ದೇವರಿಗೆ ಸಹಾ ಅನ್ನ ಹಾಕು ವವನೇ ಆಶ್ಚರ್ಯ ಗೌರಾ, ನಿನ್ನ ಮಾತು ಕೇಳಿ ನಗು ಬರುತ್ತೆ.

**ಗೌರಾ**— ನಗಬೇಡಿ ದೇವರಿಗೆ ಪಂಚಾಂಮೃತಗಳಿಂದನೈವೇದ್ಯಕ್ಕಾಗಿ ಇಡುವರಲ್ಲಾ ಅದು ಯಾರಿಂದ ಬಂದದ್ದು ತಿಳಿದುನೋಡಿರಿ ಒಟ್ಟಾರೆ ಆ ರೈತ ಗಿಂತಲೂ ಭೂಮಿಯೋಳ್ ಯಾರೂ ಶ್ರೇಷ್ಠರಿಲ್ಲಾ ಆ ರೈತರಿಂದಲೇ ಇಂದು ಜಗತ್ತು ಸಂಪತ್ತಿನಿಂದಾ ಬೆಳಗುತ್ತದೆ.

**ಈಶ್ವರಪ್ಪಾ**— (ಮುಗುಳು ನಗೆಯಿಂದಾ) ಅಂತೂ ನನಗಿಂತಲೂ ಬುದ್ಧಿವಂತಿಯಾದಿ ನಿನ್ನಂಥವಳನ್ನು ಲಗ್ನವಾದದ್ದು ನನ್ನ ಪುಣ್ಯ.

( ಗೌರಾ ನಾಚುವಳು )

( ರಂಗಪ್ಪನು ಹನ್ನೆರಡು ವರ್ಷದ ಮಗನನ್ನು ಕರೆದುಕೊಂಡು ಬರುವನು )

**ರಂಗಪ್ಪಾ—** ನಮಸ್ಕಾರರೀ ಧನೇರ ನಮಸ್ಕಾರ

**ಈಶ್ವರಪ್ಪಾ—** ಓಹೋ ನಮಸ್ಕಾರ ಬಾ ರಂಗಣ್ಣಾ ಕುಳಿತಿಕೋ ಗೌರಾ ಇವನು ಕಾನನಹಳ್ಳಿಯ ರೈತ ಪಾಪ ಬಹಳ ಬಡವ ಇವನು ಯಾವಾಗಲು ನಮ್ಮ ಅಂಗಡಿಗೆ ಮಾಲು ಹಾಕುತ್ತಾನೆ ಬಹು ಸಾತ್ವಿ ಪಾಪ ಈತನ ಹೆಂಡತಿಯು ತೀರಿಕೊಂಡಿದ್ದಾಳಂತೆ ಮಗನಿಗೆ ಶಾಲೆ ಕಲಿಸಲು ಯಾವ ಸಹಾಯವೂ ಇಲ್ಲವಂತೆ ಕಾರಣ ಇಲ್ಲಿ ಯಾರದಾದರೂ ಒಂದು ವಾರದ ಮನೆಯನ್ನು ಮಾಡಿ ಈ ಮಗುವನ್ನು ಇಂಗ್ಲೀಷ ಕಲಿಯಲಿಕ್ಕೆ ಇಡಬೇಕು ಅಂತಾ ವಿಚಾರ.

**ಗೌರಾ—** ಯಜಮಾನರೇ ಬಡವರಿಗೆ ಕಲಿತು ಬದುಕಬೇಕೆಂಬ ಆಶೆ ಅಂಕುರಿಸಿ ತಲೆಯಲ್ಲಿ ನಿಲ್ಲುತ್ತಿರುವಾಗಲೇ ನೂರಾರು ಅಘಾತಗಳು ಮುತ್ತಿ ಬಡವರನ್ನು ಇಂಥಾ ಕಂಗಾಲ ಸ್ಥಿತಿಗೆ ಯಳದೊಯ್ಯುತ್ತಿದೆ ಆ ವಿಧಿಯು ಆಗಲಾಗಲಿ ಕಲಿಯುವ ವಯಸ್ಸು ಇದೆ ಈ ಹುಡುಗನ ಮುಖವನ್ನು ನೋಡಿದರೆ ಬಹಳ ಸಾದು ಇದ್ದಂತೆ ಕಾಣುತ್ತದೆ.

**ಈಶ್ವರಪ್ಪಾ—** ಅದಕ್ಕಾಗಿಯೇ ಎಲ್ಲಿ ಯಾರ ಮನೆಯನ್ನು ವಾರದ ಮನೆಯನ್ನಾಗಿ ಮಾಡಿಕೊಡಬೇಕು ಅಂತಾ!

**ಗೌರಾ—** ಯಾರ ಮನೆಯೂ ಬೇಡಾ ನಾನೊಂದು ಮಾತು ನಿಮ್ಮನ್ನು ಕೇಳಲೀ ?

**ಈಶ್ವರಪ್ಪಾ—** ಅದೇನು ಕೇಳು ಗೌರು ಘಾಬರಿಯಾಗಬೇಡಾ

**ಗೌರಾ—** ನಮ್ಮ ಮನಿಯಲ್ಲಿಯೇ ಈ ಮಗುವಿಗೆ ಸ್ಥಾನ ಕೊಟ್ಟು ವಿದ್ಯ ಕಲಿಸಬಾರದೇಕೆ ಹೇಗೂ ನಮ್ಮ ಮಗು ರಘು ಶಾಲೆಗೆ ಹೋಗುತ್ತಾನೆ ಅವನೊಡನೆ ಈತನೊಬ್ಬ ಮಗನೆಂದು ತಿಳಿದು ಶಿಕ್ಷಣ ಕಲಿಸಿದರೆ ನಿಮಗೆ ಸಮಾಜದಲ್ಲಿ ಗಣ್ಯಸ್ಥಾನ ಸಿಕ್ಕ ಪುಣ್ಯ ಬರುತ್ತದೆ.

**ಈಶ್ವರಪ್ಪಾ—** ಗೌರಾ ನಿನ್ನ ಮಾತು ಒಪ್ಪುವಂಥಾದ್ದು ಆಗಲಿ ನಿನ್ನ ಇಚ್ಛೆಯಿದ್ದಂತೆ ಆಗಲಿ ಇದೋ ನೋಡು ರಂಗಂಣಾ ನಿನ್ನ ಮಗನು ಇನ್ನು ಬಳಿಕ ನಮ್ಮ ಮನಿಯಲ್ಲಿಯೇ ಇದ್ದು ಶಿಕ್ಷಣ ಕಲಿಯಲಿ ಅವನ ಯಾವತ್ತೂ ಶಿಕ್ಷಣದ

ಭಾರವನ್ನು ನಾವು ನೋಡಿಕೊಳ್ಳುತ್ತೇವೆ ನಮಗೆ ಇವನೊಬ್ಬ ಮಗನೆಂದು ತಿಳಿದುಕೊಳ್ಳುತ್ತೇವೆ ಈ ಮಗುವಿನ ಚಿಂತೆ ಬಿಟ್ಟು ಬಿಡು ತಿಳಿಯಿತೇ.

**ರಂಗಪ್ಪಾ**— ಆಹಹಾ ಯಂಥಾ ಪುಣ್ಯವಂತರೀಯಪ್ಪಾ ನೀಲಗೌರಮ್ಮನವರಂತೂ ನಮ್ಮ ತಾಯಿ ಇದ್ದಾಂಗ ಆದಾರ್‍ರಿ ವಟ್ಟ ಈ ಬಡಮಗನ ರಕ್ಷಣಾ ಮಾಡೂದು ನಿಮ್ಮದಾಯಿತು ಸಾಯುತನಕಾ ನಿಮ್ಮ ಹೆಸರ ಹೇಳಿ ತುತ್ತು ಅನ್ನಾ ಉಣತೀನ್ರಿ ನಿಮ್ಮ ವುಪಕಾರನಾಯಂದ ತೀರಿಸಬೇಕ್ರಿ.

**ಗೌರಾ**— ನಿನ್ನ ಮಗನ ಚಿಂತಿ ಬಿಟ್ಟಬಿಡು ರಂಗಪ್ಪಾ ನಿನ್ನ ಮಗನ ಹೆಸರೇನು.

**ರಂಗಪ್ಪಾ**— ಅಶೋಕರ್‍ರಿಯಪ್ಪಾ ಅವನ ತಾಯಿ ಪಿರೂತಿಗೆ ದೊಡ್ಡ ಹೆಸರು ಇಟ್ಟಾಳ್ರಿ.

**ಗೌರಾ**— ಚನ್ನಾಗಿದೆ ಹೆಸರು ಬಾ ಅಶೋಕಾ ಇನ್ನು ವೇಲೆ ನೀನ್ನು ನಮ್ಮ ಮನಿಯಲ್ಲಿಯೇ ಇದ್ದು ಶಿಕ್ಷಣ ಹೊಂದು ತಿಳಿಯಿತೆ.

**ರಂಗಪ್ಪಾ**— ನೋಡು ಅಶೋಕಾ ಈಶ್ವರಪ್ಪನವರಿಗೂ ಗೌರಮ್ಮನವರಿಗೂ ನಿನ್ನ ತಂದಿ ತಾಯಿ ಅಂತಾ ತಿಳಿದುಕೊಂಡು ಅವರು ಹೇಳಿದಂತೆ ಕೇಳಿಕೊಂಡು ಹೋಗು. ನಾನೂ ಆಗಾಗ ಬರತಾ ಇರತೀನಿ.

**ಸ. ಅಶೋಕ**— ಆಗಲಿ ಅಪ್ಪಾ ನೀವು ಹೇಳಿದಂತೆ ಕೇಳತಾ ಇರತೀನಿ.

**ರಂಗಪ್ಪಾ**— ಧನೇರ ನಾ ನಿನ್ನ ಬರತೀನರಿ.

**ಈಶ್ವರಪ್ಪಾ**— ರಂಗಪ್ಪಾ ಒಂದೆರಡು ದಿನಸ ಇಲ್ಲಿಯೇ ನಿನ್ನ ಮಗನ ಜೊತೆಯಲ್ಲಿ ಇರು ಆ ವೇಲೆ ಹೋಗುವಿಯಂತೆ.

**ರಂಗಪ್ಪಾ**— ಎಪ್ಪಾ ದನಾ ಕರಾ ಹಾಗ ಕಟ್ಯಾವರ್‍ರಿ ಮನಿಯಾಗ ಅವಕ ನೀರ ಕುಡಿಸಿ ಮೇವು ಹಾಕವರಿಲ್ಲರಿ ಅದಕ ನಾ ಹೋಗಿ ಬರತೀನ್ರಿ ಯಪ್ಪಾ.

**ಗೌರಾ**— ಹಾಗಾದರೆ ಎಲ್ಲರೂ ಊಟಕ್ಕೆ ಯೇಳಿರಿ ರಂಗಪ್ಪಾ ನೀನು ಊಟ ಮಾಡಿಕೊಂಡು ನಿನ್ನ ಊರಿಗೆ ಹೋಗುವಿಯಂತೆ ಬಾರಪ್ಪಾ.

**ಈಶ್ವರಪ್ಪಾ**— ಹಾಂ ಅಷ್ಟು ಮಾಡುವಿಯಂತೆ ನಡಿ ರಂಗಪ್ಪಾ.

( ಎಲ್ಲರೂ ಒಳಗೆ ಹೋಗುವರು )

# ೪ ನೇ ಪ್ರವೇಶ

## ರಸ್ತಾ

( ಸಂಗಪ್ಪನು ಕಾಯಿಸಲ್ಲೆ ಚೀಲವನ್ನು ಹಿಡಿದುಕೊಂಡು ಹೊರಟಿರಲು ನಿಂಗವ್ವಾ ಹಿಂದಿನಿಂದಾ ಕೂಗುತ್ತಾ )

**ನಿಂಗಿ**— ಯೇ, ಯೇ ಹಿರಿಯಾ ನಿಂತಗೊಳ್ಳಿ ಯೇನ ನಿನ್ನ ಕಿವಿ ಹುಗದಾವೇನ ಗಂಟಲ ಹರಿವಾಂಗ ಕಳಕಪ್ಪನ ಗಂಟಿ ಹೊಡಿಯುವಾಂಗ ವಂದ ಸವನ ವದರತೀನಿ ಕೇಳಪಲ್ಲದೇನ ನಿನ್ನ ಕಿವಿಗೆ—

**ಸಂಗ**— ಅಲ್ಲಾ ಹೆಸರಿಲ್ಲದ ದಶೆಯಿಲ್ಲದ ಬರೇ ಯೇ ಯೇ ಅಂತಾ ವದರೀದರ ನಾಯಾರನಂತ ನೋಡಲಿ ಅದರಾಗ ಬ್ಯಾರೆ ಊರಾಗ ವದರವ್ವಾ ಬಂದಾಳಂತ ವದರಿದಾಗ ಯಾರ ಓ ಅಂತಾರ ಅವರನ ಓದಬಿಡತಾಳಂತ ಅದಕ ವದರವ್ವಂದದನಿ ಆದಾಂಗಾತ ಸುಮ್ಮನ ಹೊರಟಿದ್ದೆ ಇರಲಿ ಗಾಡಿ ಯೇನ ವಳ್ಳೇ ಅವಸರಲೇ ಹೊಂಟೈತಲ್ಲಾ.

**ನಿಂಗಿ**— ಐತಲ್ಲಾ

**ಸಂಗ**— ಏನು

**ನಿಂಗಿ**— ಐತಲ್ಲಾ.

**ಸಂಗ**— ಯೇನ ಅದು ಇರೂದು ಬರೇ ಐತಲ್ಲಾ ಐತಲ್ಲಾ ಅಂದ್ರ ಯೇನೈತಿ ಯೇನಿದರ ಅರ್ಥ.

**ನಿಂಗಿ**— ಐಯಿತಲ್ಲ ಮನ್ಯಾಕ ದಿನಾವಂದಕು ಐತಲ್ಲ ಮನ್ಯಾಗ:—

**ಸಂಗ**— ಯೇನ ಮನ್ಯಾಗ ಐತಿ ಯೇನ ದಿನಾವುದಕು ಐತಿ ನಿನಗ ತಲೀ ಗಿಲೀ ಕೆಟ್ಟತೇನು ಯೇನ ಬರುವಾಗ ಯೂವದಾದರು ದೆವ್ವ ಗಿವ್ವ ಬಡ ಕೊಂಡೈತೇನು ಹಿಂಗ್ಯಾಕ ಮಾಡತೀದಿ ವಟ ಚೆಂದಾಗಿ ಹೇಳು ಇಲ್ಲಾ ದಮ್ಮ ಆರಿಸಿಕೊಂಡರ ಹೇಳು

**ನಿಂಗಿ**— ಇಲ್ನೋಡು ಧಣೇರ ಮನ್ಯಾಗ ಸಂಣಧಣೇರಫಪ್ಪನವರು ದಿನಾ ವಂದಕು ಅಪ್ಪಾರ ಕೋಟ್ನಾಗಿನ ದುಡ್ಡು ಕಳುವ ಮಾಡಿಕೊಂಡು ಹೋಗಿ ಉಡಾಳ ಹುಡುಗರ ಕೂಡಿಕೊಂಡು ಎಲ್ಲಾ ಚಟಾನು ಕಲತಾರಂತ ಆ ಕಳುವಿನ ಅಪವಾದ ನಮ್ಮ ಮನ್ಯಾಗ ಅಶೋಕಪ್ಪಾ ಅಂತಾ ಸಾಲೀ

ಕಲ್ಯಾಕ ಅದಾನಲ್ಲಾ ಅವನ ಮ್ಯಾಲೆ ಹೇಳತಾಸಂತ ಪಾಪ ಆ ಹುಡುಗನ್ನ ಎಲ್ಲಿ ಮನಿ ಬಿಡಸತಾರೋ ಯೇನೋ ಅಂತಾ ಚಿಂತಿ.

**ಸಂಗ**— ಬಿಡಬಾರದ ನೀಯಾಕ ಚಿಂತಿ ಮಾಡತೀದಿ ಅಶೋಕಪ್ಪ ನಂಥಾ ಸಂಪನ್‌ರು ಈ ಮನ್ಯಾಗ ಯಾಕ ಈ ಊರಾಗ ಇಲ್ಲಾ ಆ ರಾಘ ಯೇನ ಹೇಳಿದರೂ ನಮ್ಮ ಅಪ್ಪಾರು ನಂಬೂದಿಲ್ಲಾ ಅವ್ವಾ ಅವರು ಕೇಳ್ರು ದಿಲ್ಲಾ ಎಂದು ವ್ಯಾಳ್ಯ ಅಂಥಾದು ಬಂದರ ಯೇನ ಮಾಡೂದು ಕರೇಕ ಬಡಿ ದಾಡಿದ ವಿಕ್ರಮರಾಜನಾಂಗಾಗಲಿ ನೋಡೂನು.

**ನಿಂಗಿ**— ನೀ ಹೇಳುದೆಲ್ಲಾ ಕರೇ ಐತಿ ಪಾಪ ಆ ಹುಡುಗ ಸಾಲೀ ಕಲಿಯುದಕ ಕಲ್ಲ ಬೀಳಬಾರದೂ ಅಂತಿನಿ.

**ಸಂಗ**— ಅ ಪರಸಂಗರ ಬರಲೇಳ ನಾವ ಸಾಕ್ಷಿಕೊಟ್ಟು ರಾಘಪ್ಪ ಮಾಡು ಉದ್ಯೋಗ ಪತ್ತೇ ಹಚ್ಚೀಕೊಡುನೇಳ.

**ನಿಂಗಿ**— ಇರ್ಲಿ ಅದೆಲ್ಲಾ ಆತು ಮತ್ತ ನೀ ಹೇಳಿದ ಸಾಮಾನ ತಂದೇನ ಯೇನ ಹಂಗ ಬಂದೇ.

**ಸಂಗ**— ( ತಲೆ ತುರಿಸುತ್ತ ) ಯೇನ ಹೇಳಿದ್ದಿ ನಾನು ಪ್ಯಾಟ್ಯಾಗ ಹೋಗಿದ್ದೆ ಹೀರಿಕಾಯಿ ಬದನೀಕಾಯೀ ಮೂಲಂಗಿ ಕರಬೇವು ಕೊತೀಮರಿ ಮತ್ತ ಯೇನನ ಯಲ್ಲಾ ತಂದೀನಿ ನೀ ಹೇಳಿದ್ದ ಮರತಂಗ ಕಾಣತೈತಿ ಯೇನ ಹೇಳಿದ್ದಿ ( ತಲೆ ತುರಿಸುವನು )

( ನಿಂಗಿ ಎಲ್ಲ ಕಾಯಿಪಲ್ಲೆ ನೋಡಿ )

**ನಿಂಗಿ**— ಪಿಸ್ ಎಲ್ಲಾ ಐತಿ ನಾ ಹೇಳಿದ್ದ ಇಲ್ಲಾ.

ನಿಂಗಿ ಪದಾ

ನಲ್ಲಾ ನೀನು ಓಡಿ ಬಾ ಬಾ ನಲ್ಲಿ ಕೂಡ ಆಡ ಬಾ ||
ಹಾದ್ಯಾಗ ಬಂದ ನಿಂತಿ ಮನಿಮಾರ ಮರತ ಬಿಟ್ಟೆ ಮನಿಯಾಗ
ಖಾಲಿ ಇಟ್ಟೆ
ಯೇನೇನ ತಂದ ಇಟ್ಟೆ ನೀನೇನ ಕಭರಗೆಟ್ಟೆ
ನಲ್ಲಾ ನೀನು ಓಡಿ ಬಾ || ನಲ್ಲಿ ಕೂಡ ಆಡ ಬಾ ||

**ನಿಂಗಿ**— ಭಲೋವು ಒಂದ ಸೇರ ಬಾರೀ ಹಣ್ಣ ಹೇಳಿದ್ವಿ. ನೀ ಯಾಕ ತರಾಕ ವಾದಿ.

**ಸಂಗ**— ಅಲ್ಲಾ ಈ ಐಲಿಕಡೆ ಬರೇ ಹುಳೀನ ಬೇಡತೀಯಲ್ಲಾ ಯೇನರ ಆಕಾರ ಮಾಡಗೀಡಿಯೇನ

**ನಿಂಗಿ** – ಛೀ ಹೋಗನಿನ ನಾನೇನ ಮಾಡ್ಲಿ ಹಾಂಗ ಜೀವ ಬೇಡಿತ್ತು ಅದಕ ಹೇಳಿದ್ದೆ ಯೇನಾತು

**ಸಂಗ**— ಯೇನು ಆಗಿಲ್ಲಾ ಹೊಸಾ ಜೀವ ಹೊಟ್ಯಾಗ ಹುಟ್ಟಿತು ಅಂದ್ರ ಹುಳಿ ಹುಳಿ ಬೇಡತೈತಂತ ಜೀವಾ ಅದಕ ಕೇಳಿದ್ಯಾ

**ನಿಂಗಿ**— ಹೋಗ ಹೋಗ ದಾರ್‍ಯಾಗ ಹಿಂಗೆಲ್ಲಾ ಮಾತಾಡಿದರ ಮಂದಿ ನಕ್ಕಾರು ನಿನಗಸಕಾಕ ಬರಇಲ್ಲಾ ಇರ್ಲಿ ನಡೀ ಮನೀಗೆ ಹೋಗೂನು ಮುಂಜಾನೆದ್ದು ದಾರ್‍ಯಾಗ ಪಂಟ ಬಡಿಬ್ಯಾಡ

( ಹೋಗಹತ್ತುವಳು )

**ಸಂಗ**— ಅಲ್ಲ ಯೇ ನಿಂಗಿ ಬಾರ ಇಲ್ಲಿ ನನಗ್ಯಾಕ ರಾತ್ರಿ ಕೆಟ್ಟ ಕೆಟ್ಟ ಕನಸ ಬೀಳತಾವ ನೋಡ.

**ನಿಂಗಿ**— ಪ್ಯಾಟಿ ಗಂಡಸ ಕನಸ ರಾತ್ರ್ಯಾಗ ಬೀಳುದು ಹಗಲ್ಯಾಗ ಬೀಳತಾವಯೇನ ನೀ ಯಂತವ ಆದೀದಿ ಯೇನಂತ ಬೀಳತಾವು ಯಷ್ಟ ತ್ತ್ಯಾಗ ಬೀಳಿತಾವು ನಡರಾತ್ರ್ಯಾಗ ಬೀಳತಾವೇನ ಮತ್ತ ಹೇಳ ಯೇನಂತ ಬೀಳಿತಾವ

**ಸಂಗ**— (ನಾಚುತ್ತ) ಹೇಳಾಕ ನನಗ ನಾಚಿಗಿ ಬರತ್ತ ಆ ಕನಸಿನ ಮ್ಯಾಲೆ ಲೆಕ್ಕ ಹಾಕಿ ನೋಡಿದರ ಯಲ್ಲೇ ನಮ್ಮ ಬಾಳೇಕ ಬರೀ ಬೀಳತ್ತ ಅಂತ ಭಯಾ ಬರತ್ತ.

**ನಿಂಗಿ**— ನಾಚಕಿ ಯಾಕ ಬರತ್ತ ನಾಚಕಿ ನಮ್ಮಂಥಾ ಹೆಂಣುಮಕ್ಕಳಿಗೆ ಬರತ್ತ ತಮಾಮು ಗಂಡಸ ಆದೀದಿ ಮಾರಿ ಮ್ಯಾಗ ಮೀಸಿ ಹೊತ್ತೀದಿ ನಿನಗ್ಯಾಕ ಬರತ್ತ ನಾಚಕಿ ಹೆಣಮಕ್ಕಳು ಮಾಡಿದಾಂಗ ಮಾಡತೀದಿ ಇಂಥಾದೆಲ್ಲಾ ಸಮುಸ್ಯಾ ಬಿಡು ಸುಮ್ನನ ಬಾ ಇನತ್ತ ರಾತ್ರ್ಯಾಗ ನೀನು ಹನಾ

ಕಟ್ಟಿ ಗೋದಲ್ಯಾಗ ಮುಲಗು ಹೀರೆಆಟಕ್ಕೆ ಹೋಗಬೇಡ ಅಲ್ಲಿ ಹೆಣಸೋಗು ಮಾಡಿರುಡಾ ಅದ ಬಡಬಡಿಕಿ ಇವತ್ತ ನಿನ್ನ ತಲದುಂಬಿನ.

**ಸಂಗ**— (ಅರ್ದಕ್ಕೆ)ಹಾ ಯೇನ ಅಂದೆಲ್ಲಾ

**ನಿಂಗಿ**— ನಾಯೇನ ಅಂದ್ಯಾ ತಲದುಂಬು ಅಂದ್ಯಾ

**ಸಂಗ**— ಯೇ! ಯೇ! ಹಳ್ಳಿ ತಲದುಂಬಲ್ಲಾ ತಲಗುಂಬು ಅಂತಾ ಅನ್ನು

**ನಿಂಗಿ**— ನೋಡ ಹಾಂಗಾರ ಅಂತೀನಿ! ತಲಿದುಂಬು

**ಸಂಗ**— ಯೇ ಮಾರಿಕೆತ್ತುವಾಂಗ ಕೊಡಲೇನ! ಯೇನ ನೆಟ್ಟಗ ತಲ ಗುಂಬು ಅಂತಾ ಅಂತಿದೋ ? ( ಹೊಡೆಯಲು ಹೋಗುವನು )

**ನಿಂಗಿ**— (ತಡೆದು) ಹಾಂಗೆಲ್ಲಾ ! ನೀನು ಮೈ ಮ್ಯಾಲಿ ಬರಬ್ಯಾಡ ನೋಡ ನೀ ಹಿಂಗೆಲ್ಲಾ ಮೈ ಮ್ಯಾಲಿ ಬಂದರ ನಾನನ್ನ ತವರಮನಿಗೆ ಹೋಗು ವಾಕಿ ನಾನೋಡ ನಮ್ಮಪ್ಪಗ ನಾನ ಪಬ್ಬಳ ಬಂಗಾರದಂಥ ಮಗಳು! ನೀನ್ನು ಮೆಲ್ಲಕ ಬಂದು ಸ್ವಾದರತ್ತಿ ಅಂತಾ ತಿಳಿದು! ನಿನ್ನ ಮಗಳಿಗೆ ಹಾಂಗನೋಡ ತೀನಿ ಹಿಂಗ ನೋಡತೀನಿ ಅಂತಾ ವಲಿಮುಂದ ಕುಂತ ಅತ್ತಿ ಕಾಲಹಿಡದಂಗ ಮಾಡಿ ನನ್ನ ಮಾಡಿಕೊಂಡ ಬಂದಿ! ಛಲೋವು ಯುಡ್ಡ ಕುಬಸತರು ಕಿಮ್ಮತ್ತು ಇಲ್ಲಾ! ಯಷ್ಟು ಯೇರೇರಿ ಬರತೀದಿ ಹಂಗ

**ಸಂಗ**— ಯೇ ನಿಂಗಿ ನಿಮ್ಮ ಅಪ್ಪ ಅವ್ವಾ ನಿನ್ನ ಹಂಗ ಪುಗಸೆಟ್ಲೆ ಕೊ ಟ್ಟೆಲ್ಲೇಳ! ಜಣಾ। ಜಣಾ। ಕರೇ ಕಂಬಳಿ ಮ್ಯಾಗ ದುಡ್ಡ ಯಣಿಸಿಕೊಂಡಾರ! ಐದು ನಯಾಪೈಸಿ ಕಮ್ಮ ಆದರ ತಾಳೀ ಹರಕತು ಮಾಡಿದ್ದಾ ನಿಮ್ಮ ಅಪ್ಪಾ ಸುಮ್ಮನ ನಾ ಹೇಳಿದ್ಯಾಂಗ ಅಂದೀ ಪಾಡಾತು ಇಲ್ಲಾ ಅಂದ್ರ ಇಬತ್ತಿ ವೀಳ್ಯ ಆತಂತನ ತಿಳಿ (ತೊಳಯೇರಿಸಿ ಕಚ್ಚಿ ಹಾಕುವನು)

**ನಿಂಗಿ**— (ಅಳುತ್ತ) ನೀನು ಹೀಂಗೆಲ್ಲಾ ಹೆಣಮಕ್ಕಳ ಮುಂದ ಹಾರಾ ಡಿದರ ನಾಯೇನ ಕೇಳರೆ ಅಲ್ಲಾ ಯೇನ ಅನಬೇಕು ಕಲಿಸು ಅಂದ್ರೆ ಅಂತಿನಿ!

**ಸಂಗ**— ಕಲಿ ಹಾಂಗಾರ ತಲೀಗುಂಬು

**ನಿಂಗಿ**— ಅಂತೀನನೋಡ ತಲೀ ಅಂಬು

**ಸಂಗ**— ಇಕಾ ವಂದೊಂದ ಆಕಸಾರ ಕಲಸತೀನಿ ಅನ್ನು

**ನಿಂಗಿ**— ಹು ಹಾಂಗಮಾಡು! (ಸಂಗನು ವಂದೊಂದ ಕಲಿಸುವನು)

**ನಿಂಗಿ**— (ಆಲೋಚಿಸಿ)ಹಾಂ! ಬಂತು ತಲಗುಂಬ ಇವತ್ತ ರಾತ್ರ್ಯಾಗ ತಲಿಗುಂಬುದ ಬುಡಕ ಆದನ ಇಡತೀನಿ ನಡಿ!

**ಸಂಗ**— ತಲಗುಂಬನ ಬುಡಕ ಆದನ ಇಡತೀನ ಅಂದ್ರಯೇನ!

**ನಿಂಗಿ**— ಆಯ್ ಆದರ ಬುಡಕ ಇದನ್ ಇಡತೀನ ಅಂದೆ

**ಸಂಗ**— ಯೋ ಮಾರ್ರ್ಯಾಳ ಯದರಬುಡಕ ಯೇನ ನಿಡತೀದಿ

**ನಿಂಗಿ**— ಅಕಸಾರ ವಡದ ಹೇಳಬೇಕನ ಮತ್ತ ತಲಗುಂಬನ ಬುಡಕ ಕಸಬರಗಿ ಇಡತೀನಿ ಯೇನನ ಬೀಳತಾವ ಅದನ ಹೇಳಿಂತ ನಡಿ!

**ಸಂಗ**— ಕಸಬರಗಿ ಇಡತೀದ್ಯಾ ಬಹಳ ಚಲೋ ಮಾಡತೀದಿ ನಡಿ ಹೋಗುನು [ಇಬ್ಬರ್ರು ನಗುತ್ತಾ ಹೋಗುವರು]

## ೫ ನೇ ಪ್ರವೇಶ

**(ಈಶ್ವರಪ್ಪ) (ಶ್ರೀಮಂತರ ಮನೆ ನಿಂಗವ್ವಾ ಕಸಾ ಅನ್ನುತ್ತಾ ಪದಾ)**

**(ಹಾಡುವಳು)**

**ನಿಂಗಿಪದಾ**—

**ಗೌರಾ**— (ವಳಗಿಂದ ಪ್ರವೇಶಿಸಿ) ನಿಂಗವ್ವಾ ಅವರ ಖೋಲಿಯ ಕಸ ಹೊಡೆಯುವ ಮುಂದೆ ಯೇನಾದರೂ ಸಿಕ್ಕಿತೇನವ್ವಾ?

**ನಿಂಗಿ**— ಇಲ್ಲಿ ಬಿಡ್ರಿಯವ್ವಾ ನಂಗೇನು ಕಾಣಲಿಲ್ಲ ಬಿಡ್ರಿ ಯಾಕರೀ ಯವ್ವಾ ಯೇನರ ಹೋಗ್ಯೈತೇನ್ರಿ?

**ಗೌರಾ**— ನಿಂಗವ್ವಾ ಅವರ ಜೇಬನಲ್ಲಿದ್ದ ವಂದನೂರು ರೂಪಾಯಿಯ ನೋಟು ಹೋಗಿದೆಯಂತೆ ಇದರ ಸಲುವಾಗಿ ಯಜಮಾನರಂತೂ ಬಹಳ ರೊಚ್ಚಿಗೆದ್ದಿರುವರು ಅದಕ್ಕಾಗಿ ವಿಚಾರಿಸಿದೆ.

**ನಿಂಗಿ**— ಅಲ್ರಿಯವ್ವಾ ಕೋಟಿನಾಗಿದ್ದ ನೋಟು ಸುಮ್ಮಕ ಹ್ಯಾಂಗ ತಳಗ ಬೀಳತಾವರ್ರಿ ಅವ್ವಾರ ದಿನಾವಂದಕೂ ಯೇನಾರ ಸಾಮಾನ ಹೊಕ್ಕಾವುಅಂತಿರಿ ಎವ್ವಾ ನಾವು ಬಡವರ ಇಂಥಾಕಳ್ಳತನಾ ಮರೀ ಮಾಡವರಲ್ಲರ್ರಿ

ನಮಗ ಬೇಕಾದ್ರ ಇನ್ನೂ ನಿಮನ್ನ ಕಾಡಿ ಬೇಡಿ ಇಸಕೊಳ್ಳತೀವಿರಿ ಇವತ್ತ ಇಟ ಆಕು ನಾಳೆ ದೊಡ್ಡದು ಆತಂದ್ರ ನಮಗ ಮುಂಙು ಹೊರು ಸರತಿ ಬಂದೀ ತಿರ್ರಿ ದಿನಾವಂದಕೂ ಹೀಂಗೆಲ್ಲಾ ಮನ್ಯಾಗ ಕಳವು ಆಗಾಕ ಹತ್ತಿತು ಅಂದ್ರ ನಾವು ಹ್ಯಾಂಗ ಇರಬೇಕರ್ರಿ ನೀವ ಹೇಳ್ರಿ.

**ಸಂಗ**— (ವಳಗಿಂದಾ ಬಂದಾ) ಯೇನ್ರಿ ಇದು ಗದ್ಲಾ

**ನಿಂಗಿ**— (ಸನ್ನೆ ಮಾಡಿ) ಬಾಯಲ್ಲಿ ಇವತ್ತೇನ ಅಪ್ಪಾರ ಕೋಟನಾ ಗಿಂದು ನೋಟ ಹೋಗ್ಯಾವಂತ ಯವ್ವಾ ಖರೆ (ಹೇಳಲ್ಯಾ) ಬೇಲೆದ್ದು ಹೊಲ್ಕೊ ಮೆದ್ರ ವುಳದೀತೇನ್ರಿ ಇದ್ದ ಮೂರು ಮಂದ್ಯಾಗ ಕದ್ದವರು ಯಾರ್ರಿ ಹಿಂಗೆಲ್ಲಾ ಆದ್ರ ನಾವು ಇರುದು ಹ್ಯಾಂಗೆ ದುಡುಸಕೊಳ್ಳಾಕ ಬ್ಯಾಸರ ಆಗಿದ್ದರ ಬ್ಯಾಷಂತ ಹೇಳಿಬೀಡ್ರಿ ಯೇ ನಿಂಗಿ ಇಲ್ಲಿ ದುಡಿದು ಬ್ಯಾಡಾ ಮತೆಲ್ಲರ ನೋಡನು ನಡಿ ನಡಿ ಹೋಗುನು (ಹೋಗ ಹತ್ತುವರು)

**ಗೌರಾ**— ಸಂಗಪ್ಪಾ ನಿಂಗವ್ವಾ ಸ್ವಲ್ಪ ತಡೆಯಿರಿ ಪಾಪ ನಿಮ್ಮನ್ನು ಕೇಳುವದೇ ತಪ್ಪು ನೀವು ಅಂಥವರಲ್ಲ ಯಂಬುವದು ತಿಳಿದಿದೆ ಆದರೂ ಕೇಳುವ ಪದ್ಧತಿಯಂತೆ ಕೇಳಿದೆ ನೀವೇನು ಮನಸ್ಸಿಗೆ ಹಚ್ಚಿಕೊಳ್ಳಬೇಡಿರಿ ನಿಂಗವ್ವಾ ನಡೆ ಅಡಿಗೆ ಮಾಡುನಡೆ ಸಂಗಪ್ಪಾ ನೀನು ನೀರು ಹಣಸು ನಡೆ

( ಸಂಗ–ನಿಂಗವ್ವಾ ಹೋಗುವರು )

**ಈಶ್ವರಪ್ಪಾ**— (ಪ್ರವೇಸಿಸಿ) ಯೇಕೆ ಯೇನಾಯಿತು ಕಳೆದು ಹೋದ ನೋಟು ಸಿಕ್ಕಿತೇ ?

**ಗೌರಾ**— ಇಲ್ಲಿ ಸಂಗಪ್ಪನನ್ನೂ ನಿಂಗವ್ವನನ್ನೂ ಕೇಳಿದೆ ಅವರು ತೆಗೆ ದುಕೊಂಡಿಲ್ಲವೆಂದರು ಅವರ ಸಾತ್ವಿಕರೆಯನ್ನುವಮ ನಿಮಗಾದರೂ ತಿಳಿದ ಮಾತದೆ ಇನ್ನೂ ಅಶೋಕನೂ ಅಂಥವನಲ್ಲಾ

**ಈಶ್ವರಪ್ಪಾ**— ಹಾಗಾದರೆ ನಮ್ಮ ರಘಪಿನ ಹೊರ್ತಾಗಿ ಯಾರೂ ಅಂಥವರಿಲ್ಲ ಮನೆಯಲ್ಲಿ ವುಡಾಳ ಹುಡುಗರ ಜೊತೆಯಲ್ಲಿ ತಿರುಗಿ ಮನಬಂದಂತೆ ವರ್ತಿಸ ಹತ್ತಿತ್ತಾನೆ ಅನೇಕ ಜನರು ನನ್ನ ಮಗನ ಗುಣಗಾನ ಅವನ ಹೀನ ನಡತೆಯನ್ನು ಊರತುಂಬೆಲ್ಲಾ ಆಡಿಕೊಳ್ಳುತ್ತಿದ್ದಾರೆ ಆವಾರ್ತೆಯು ಸಹಾ ನನಗೆ ತಿಳಿದಿದೆ ಕಾರಣ ಅವನಿಗೆ ಯೇನು ಮಾಡಬೇಕೆಂಬುವದೇ ನನಗೆ ತಿಳಿಯ ದಾಗಿದೆ.

**ಗೌರಾ**— ಹಾಗೇ ಬುದ್ಧಿ ಹೇಳುವದೇ ಇಗಿನ ಹುಡುಗರಿಗೆ ಯೇನಾದರೂ ಅಂದರೆ ತಿರಿತು ಮತ್ತಿಷ್ಟು ದಾರೀ ಬಿಡುತ್ತಾರೆ.

**ಈಶ್ವರಪ್ಪಾ**— ಸಾಕು ಸುಮ್ಮನಿರು ಬುದ್ಧಿ ಹೇಳಲು ಎಳಯ ಮಗುವೇನೆ ಮದುವೆಯ ವಯಸ್ಸಾಯಿತು ಇರುವ ವಬ್ಬಮಗನು ಜಾಣನಾಗಲೆಂದು ವಿದ್ಯಕಲಿಯಲು ಹಚ್ಚಿದರೆ ಕೋಣನಾಗಿ ಕೆಟ್ಟ ಕೃತಿಗಳನ್ನೇ ಕಲಿಯ ಹತ್ತಿದನಲ್ಲಾ ಜಾಣನಾಗಲಿಲ್ಲಾ ನೋಡ ಚಿಕ್ಕಂದಿನಲ್ಲಿಯೇ ಅಶೋಕನು ನಮ್ಮ ಮನೆಯಲ್ಲಿಯೇ ಬೆಳೆದು ದೊಡ್ಡವನಾಗಿ ಎಲ್ಲರಿಗೂ ಬೇಕಾಗಿ ವುತ್ತಮ ಶಿಕ್ಷಣವನು ಕಲಿತು ವಿದ್ಯಾವಂತನಾದ ಇನ್ನೊಂದು ವರ್ಷ ಕಲಿತರೆ ವಕೀಲನಾಗುತ್ತಾನೆ ಅಂಥ ಉತ್ತಮ ಮಕ್ಕಳನು ಹಡಿಯಬೇಕಾದರೆ ಪೂರ್ವ ಜನ್ಮದ ಪುಣ್ಯಾಬೇಕು ನಮ್ಮ ರಘುಎಂದು ಬುದ್ಧಿವಂತನಾಗುತ್ತಾನೋ ದೇವರಿಗೆ ಗೊತ್ತು

**ಗೌರಾ**— ಯಜಮಾನರೇ ನಾಳೆ ಮದುವೆಯಾಗಿ ಬಾಳೆಸಾಗಲಿ ತಾನೇ ಬುದ್ಧಿ ಬರುತ್ತದೆ.

(ಅಷ್ಟರಲ್ಲಿ ಪೋಷ್ಟಮನ್ನ ಬಂದು ಟಪಾಲ ಕೊಟ್ಟು ಹೋಗುವನು)

**ಗೌರಾ**— ಮಾತರ ಪತ್ರವದು ಯಲ್ಲಿಂದ ಬಂದಿತು.

**ಈಶ್ವರಪ್ಪಾ**— ಸ್ವಲ್ಪ ತಡೆ (ಟಪಾಲ ನೋಡಿ ಮುಗುಳನಗೆಯಿಂದಾ) ಗೌರಾ ಇದೊಂದು ಸಂತೋಷದ ಪಾರ್ತೆ ವೊನ್ನೆ ನಮ್ಮ ಮನೆತನ ನೋಡಲು ಡಾವಣಗೇರಿಯವರು ಬಂದಿದ್ದಿಲ್ಲವೇ ಅವರ ಪತ್ರವಿದು ವರಾ ಹಾಗೂ ನಮ್ಮ ಮನೆತನಾ ಅವರ ಮನಸ್ಸಿಗೆ ಬಂದಿದೆಯಂತೆ ತಮ್ಮ ಮಗಳನ್ನು ಕೊಟ್ಟು ಹತ್ತು ಸಾವಿರವರದಕ್ಷಿಣೆಯನ್ನು ಅಳಿಯನಿಗೆ ಕೊಟ್ಟು ಮದುವೆಯನ್ನು ಸಹಾ ತಮ್ಮ ಮನೆಯ ಮುಂದೆ ಮಾಡಿಕೊಡುತ್ತಾರಂತೆ ಇದಕ್ಕೆ ಬೇಗ ವುತ್ತರ ತಿಳಿಸಿರಿ ಅಂತಾ ಬರದಿರುವರು.

**ಗೌರಾ**— (ಮುಗುಳು ನಗೆಯಿಂದಾ) ಹಾಂ ಹೀಗೋ ಕನ್ಯೆಯು ಲಕ್ಷಣವಿದೆ! ವಿದ್ಯಕಲಿತವಳು ಇದ್ದಾಳೆ! ಅಲ್ಲದೆ ಇಷ್ಟು ವರದಕ್ಷಿಣೆಯನ್ನು ಕೊಟ್ಟು ತಮ್ಮ ಮನೆಯ ಮುಂದೆ ಮದುವೆ ಮಾಡಿಕೊಡುವರೆಂದ ಬಳಿಕ ವಪ್ಪಿ ಬಿಡಲ್ಲಾ.

**ಈಶ್ವರಪ್ಪಾ**— ಏಡೆಲ್ಲಾ ಸರಿ ಕನ್ಯೆ ನೋಡಿದ ನಿನ್ನ ಮಗ ಭೂಪತಿ

ವಪ್ಪಬೇಕಲ್ಲಾ ನೋಡೋಣ ಅವನನ್ನು ಕೇಳೋಣ.

(ಅಶೋಕನು ಕಾಲೇಜನಿಂದಾ ಬರುವನು)

**ಗೌರಾ**—(ನೋಡಿ) ಅಶೋಕಾ ರಘು ಬರಲಿಲ್ಲವೇ?

**ಅಶೋಕ**— ಅವರು ಹಿಂದೆ ಬರಹತ್ತಿದ್ದಾರವ್ವಾ

**ಗೌರಾ**— ಯೇಕಪ್ಪಾ ಮುಖಾ ಸಪ್ಪಗದೆಯಲ್ಲಾ ಮೈಯಲ್ಲಿ ಸ್ವಸ್ಥವಿಲ್ಲವೇನು?

**ಅಶೋಕ**— ಅದೇನಿಲ್ಲ ಅವ್ವಾ ಅವರೇ ಮುಂದಿನ ಪರೀಕ್ಷೆಯ ಹಣ ತುಂಬಲು ಅಪ್ಪನಿಗೆ ಪತ್ರ ಬರೆಯದು ಯೆಂಟು ದಿನವಾದರೂ ವುತ್ತರವೇ ಇಲ್ಲಾ.

**ಈಶ್ವರಪ್ಪಾ**— ಮಗು ಅಶೋಕಾ ಇಂದಿಲ್ಲ ನಾಳೆ ಬರಬಹುದು ಇಷ್ಟಕ್ಕೆ ಚಿಂತೆ ಹಿಡಿಯಬೇಕೇನು ನಾವಿರುವ ವರೆಗೆ ಯಾವದಕ್ಕೂ ವ್ಯಸನ ಪಡಬೇಡಾ ನಡೆ ವಳಗೆ ಅಭ್ಯಾಸ ಮಾಡು.

**ಅಶೋಕ**— ಆಗಲಿ ಅಪ್ಪಾ (ಹೋಗುವನು) (ರಘು ಕಾಲೇಜಿನಿಂದ ಬರುವದು)

**ಈಶ್ವರಪ್ಪಾ**— ರಘು ಬಾ ಹೀಗೆ ಮೊನ್ನಿನ ಸಲಾ ನೀನು ಡಾವಣಗೇರಿ ಯಕನ್ಯೆ ನೋಡಿ ಬಂದಿರುವೆಯಲ್ಲಾ ಅವರು ವಪ್ಪಿಗೆ ಕಳಿಸಿರುವರು ಮತ್ತು ಅವರು ನಿನಗೆ ಹತ್ತು ಸಾವಿರ ವರದಕ್ಷಿಣೆಯನ್ನು ಕೊಟ್ಟು ತಮ್ಮ ಮನೆಯ ಮುಂದೆ ಲಗ್ನ ಮಾಡಿಕೊಡುವರಂತೆ ಕಾರಣ ನೀನು ಆ ಕನ್ಯಯನ್ನು ವಪ್ಪುವಿಯೋ! ಇಲ್ಲವೇ! ಅನಂತಪುರವಲ್ಲಿಯ ಕನ್ಯ ವಪ್ಪುವಿಯೋ ಬೇಗತಿಳಿಸು.

**ರಘು**— ಬೇರೆ ಯಾವದೂ ಬೇಡಾ ಇಗ ಹೇಳಿ ಕಳಿಸಿರುವ ಕನ್ಯಯನ್ನೇ ನಾನು ಮದುವೆಯಾಗುತ್ತೇನೆ.

**ಈಶ್ವರಪ್ಪಾ**— ಆಗಲಿ ನಿನ್ನ ಇಷ್ಟೆ ಗೌರಾ ನಾಳಿನ ದಿನಾ ಡಾವಣಗೇರಿಗೆ ಹೋಗಿ ಮದುವೆ ತಾರೀಕು ನಿರ್ದರಿಸಿಕೊಂಡು ಬರೋಣ.

**ಗೌರಾ**— ಹಾಗೇ ಮಾಡೋಣ ರಘು ನಡೆಯಪ್ಪಾ ನೀನು ಅಶೋಕನೂ ಸ್ನಾನ ಮಾಡಿರಿ ನಿನಗಂತೂ ಬೇಗ ಹೆಂಡತಿ ಸಿಕ್ಕಳು ಇನ್ನಾದರೂ ಬುದ್ಧಿವಂತನಾಗು.

**ರಘು**— ಆಗಲಿ ಅಮ್ಮಾ ಹಾಗೇ ಆಗಲಿ (ವಳಗೆ ಹೋಗುವನು)

**ರಂಗಪ್ಪಾ**— (ಪ್ರವೇಶಿಸಿ) ನಮಸ್ಕಾರ್ರಿಯಪ್ಪಾ ನಮಸ್ಕಾರ.

**ಈಶ್ವರಪ್ಪಾ**— ಓಹೋ ರಂಗಪ್ಪ ನಮಸ್ಕಾರ ಬಾ ಇಗ ನಿನ್ನನ್ನೇ ನೆನಿಸ ಹತ್ತಿದ್ದನು ಆಶೋಕ ಮತ್ತೇನು ವಿಷಯ

**ರಂಗಪ್ಪಾ**— ಅಶೋಕ ದುಡ್ಡು ಬೇಕು ಅಂತಾ ಪತ್ರ ಬರದಿದ್ದಾ ಅವನ ಹಣದ ಸಲುವಾಗಿ ಎಲ್ಲಾ ಹೊಲಾ ಲಾವಣೀ ಹಾಕಿ ಇರುವ ಮನಿ ಸಹಿತ ವತ್ತಿ ಹಾಕೇನ್ರಿ ಇನ್ನ ಸಾಲಾ ಮಾಡುದು ಆತು ಕೈನು ಕಟ್ಟ್ಯಾತಿ ಯೇನು ಮಾಡುದು ಅಂತಾ

**ಈಶ್ವರಪ್ಪಾ**— ರಂಗಪ್ಪಾ ಸಧ್ಯ ಯಷ್ಟು ತೊಂದರೆ ಸಹಿಸಿಕೋ ನಿನ್ನ ಕೈಲಾದ ಮಟ್ಟಿಗೆ ರೂಪಾಯಿ ಕಳಸಿಕೊಡು ನಾವು ಇದ್ದೇ ಇರುವೆವಲ್ಲಾ ಯಾಕಂದರೆ ದೊಡ್ಡ ಪರೀಕ್ಷೆ ಹಣಾ ಬಹಳ ಬೇಕಾಗುತ್ತದೆ ಇದೊಂದು ವರ್ಷ ವಾದರೆ ನಿನ್ನ ಮಗನು ದೊಡ್ಡ ವಕೀಲನಾಗಿ ದೊಡ್ಡ ಬಿಲ್ಡಿಂಗಿನಲ್ಲಿ ವಾಸಮಾ ಡುವನು ನಮ್ಮ ಕೇಂದ್ರಕ್ಕೆ ಮೊನ್ನಿನ ಸಲಾ ಪ್ರಥಮಸ್ಥಾನ ಪಡೆದು ನಮ್ಮ ನಿಮ್ಮ ಕೀರ್ತಿ ತಂದನು ಅಶೋಕನು ವಕೀಲಿ ಪರೀಕ್ಷೆಯಲ್ಲಿ ಶ್ರೇಯಸ್ಸು ಪಡೆ ದರೆ ನಿನ್ನ ಮುಂದೆ ಯಾರು ರಂಗಣ್ಣಾ.

**ರಂಗಪ್ಪಾ**— ಇದೆಲ್ಲಾ ನಿಮ್ಮ ಆಶೀರ್ವಾದರ್ರಿ ಯಪ್ಪಾ ನಿಮ್ಮಂಥಾ ಅಪ್ಪಾ ಅವರು ದೊಡ್ಡ ಗುಣದ ಅವ್ವಾ ಅವರು ನನ್ನ ಮಗನ ಕಲ್ಯಾಣಕ್ಕಾಗಿ ಇರುವಿರಿ ಅಂದಮ್ಯಾಗ ನನಗ್ಯಾವ ಚಿಂತಿರ್ರಿಯಪ್ಪಾ (ತಲೆತುರಿಸಿಕೊಳ್ಳುತ್ತಾ)

**ಗೌರಾ**— ರಂಗಪ್ಪಾ ಮತ್ತಾವ ಸುದ್ದಿ ತಂದಿರುವಿಯಪ್ಪಾ ನಮ್ಮಲ್ಲಿಗೆ ಬಂದಾಗ್ಗೊಂಮ್ಮೆ ಯಾವದಾದರೊಂದು ಹೊಸಸುದ್ದಿ ಲ್ಲಂದೇ ಇರುವಿರಿ ಹೇಳು ಅದಾವ ಸುದ್ದಿ.

**ರಂಗಪ್ಪಾ**— ಯವ್ವಾ ನಮ್ಮ ತಂಗಿಯ ಹೊಟ್ಟೆಯಲ್ಲಿ ಯರಡು ಹೆಣ್ಣು ಮಕ್ಕಳಿರುವರು ಆದರಲ್ಲಿ ದೊಡ್ಡ ಮಗಳನ್ನು ಧಾರವಾಡಕ್ಕೆ ಕೊಟ್ಟಿರುವರ ಇನ್ನು ವುಳಿದ ಸಣ್ಣವಗಳನ್ನು ನಮ್ಮ ಅಶೋಕಪ್ಪನಿಗೆ ಕೋಡಬೇಕು ಅಂತಾ ತಿಳಿದು ನಮ್ಮ ಮನಿಗೆ ಬಂದಿದ್ದರ್ರಿ ನಮ್ಮ ಅಶೋಕಪ್ಪನು ನಿಮ್ಮಲ್ಲಿ ಇದ್ದು ಇಷ್ಟು ಸಾಲಿ ಕಲತದ್ದ ಕೇಳಿ ಬಹಳ ಸಂತೋಷ ಪಟ್ಟು ಮನಿಮುಂದ ಆಕಿ

ಕಾಳು ಹಾಕಿ ಕೊಡತೀವಿ ಅಂತಾ ನಮ್ಮ ಬೀಗ ಬಹಳ ಹೇಳಕೊಂಡಾರ್ರಿ ನಾನು ನಿಮ್ಮನ್ನ ಕೇಳಿ ಹೇಳತೀನಿ ಅಂತಾ ಹರಕತ್ತ ಮಾಡೀನ್ರಿ ಅವಕ ಹ್ಯಾಂಗ ಅಂತಾ।

**ಗೌರಾ**— ರಂಗಪ್ಪಾ ಹುಡಿಗಿಯು ಹೇಗಿರುವಳು ಅವಳ ಹೆಸರೇನು ಯಾಕಂದರೆ ಈಗಿನ ಹುಡುಗರು ಕಲಿತವರು ಅವರ ಮನಸ್ಸಿಗೂ ಬರಬೇಕು.

**ರಂಗಪ್ಪಾ**— ಯವ್ವಾ ಹುಡಿಗೇನ್ರಿ ಕಟನ ಗೊಂಬವ್ವ ಇದ್ದಾಂಗ ಅದಾಳ್ರಿ ಯದರಾಗೂ ತಗೆವಾಂಗ ಇಲ್ರಿ ಬಾಳವಂತ ಜನರು ಹೆಸರುನೊಡ್ರಿ ಸುಶೀಲವ್ವರ್ರಿ

**ಈಶ್ವರಪ್ಪಾ**— ರಂಗಣ್ಣಾ ನಿನ್ನ ಮನೆತನಕ್ಕೆ ಸರಿಯಾದ ಬೀಗತನ ವಿದೆ ಅಲ್ಲದೆ ಸೊಸೆಯು ಹೆಸರೂ ವುತ್ತಮವಿದೆ ನಮ್ಮನ್ನು ವಿಚಾರಿಸಲಿಕ್ಕೆ ಅವ ರೇನು ಹೊರಗಿನವರೇ ನಿಮ್ಮ ವಡಹುಟ್ಟಿದ ತಂಗಿಯು ನಿನ್ನ ಮಗನ ವಿದ್ಯಾ ಅಭ್ಯಾಸಕ್ಕೆ ಮೆಚ್ಚಿ ಕನ್ಯಕೊಡಲು ವಪ್ಪಿದ್ದಾರೆ ಇದೊಂದುಕಲ್ಯಾಣ ಕಾರ್ಯವೇ ವಪ್ಪಿಬಿಡು ನಿನ್ನ ಮಗನ ಭಾಗ್ಯವಿದೆ

**ಗೌರಾ**— ರಂಗಪ್ಪಾ ನಮ್ಮ ರಘುವಿಗೂ ಕನ್ಯಕೊಡಲು ವಪ್ಪಿ ಹೇಳಿ ಕಳುಹಿದ್ದಾರೆ ಬಹುತರ ಅಶೋಕ ರಘು ಇವರೀರರ್ವ ಮದುವೆ ಕೂಡಿಯೇ ಆಗುವ ಸಂಭವವಿದೆ

**ರಂಗಪ್ಪಾ**— ಯವ್ವಾ ಹಂಗಾದರೆ ಇಬ್ಬರಹಣಿ ಅಕ್ಕಿನೂ ಕೂಡಿ ಬಂದಾ ವರ್ರಿ ದೇವರು ಇಬ್ಬರಿಗೂ ಕಲ್ಯಾಣ ಮಾಡಿದ

**ಈಶ್ವರಪ್ಪಾ**— ಅಶೋಕಾ ಅಶೋಕಾ

**ಅಶೋಕ** ಬಂದೆ ಅಪ್ಪಾಅವರೇ (ಒಳಗಿಂದ ಬರುವನು)

**ಈಶ್ವರಪ್ಪಾ**— ಇಗೋ ನೋಡು ಅಶೋಕಾ ನಿನ್ನ ತಂದೆಯವರು ನಿನ್ನ ಮದುವೆಯು ಸಂದೇಶ ತಂದಿರುವನು ಇದಕ್ಕೆ ನಮ್ಮ ವಪ್ಪಿಗೆಯೂ ಅದೆ ನಿನ್ನ ಅಭಿಪ್ರಾಯವೇನಿದೆ

**ಅಶೋಕ**— ನೀವು ಹೇಳಿದ ಮಾತಿಗೆ ಮಾನ್ಯ ಮಾಡುವೆ ನಿಮ್ಮೆಲ್ಲರ ವಚನ ಪಾಲಿಸುವದೇ ನನ್ನ ಧರ್ಮ.

**ಗೌರಾ**— ಬಾ ಅಪ್ಪಾ ಅಶೋಕಾ ನಿನ್ನಂಥಾ ಬುದ್ಧಿವಂಥ ಮಗನನ್ನು ನಾಕಾಣೆ ಯಜಮಾನರೇ ಈ ದಿನ ಎದ್ದ ಮುಹೂರ್ತನೇ ಚನ್ನಾಗಿದೆ ನಡಿಯಿರಿ ಎಲ್ಲರೂ ಊಟ ಮಾಡಿರಿ.

**ಈಶ್ವರಪ್ಪಾ**— ನಡೆ ರಂಗಣ್ಣಾ ನಿನ್ನ ಮನಸ್ಸಿನಂತೆ ಆಗಿ ಸೊಸೆಯನ್ನು ಪಡೆದಂತಾಯಿತು ಇನ್ನ್ನ ಮೇಲೆ ನಮ್ಮನ್ನು ಮರೆತು ಬಿಡುವಿಯೇನೋ!

**ರಂಗಣ್ಣಾ**— ಯಪ್ಪಾ ನಿಮನ್ನ ಮರೆತ ಯಾವನ ಕರದಾಗ ಬೀಳಲಿ ನಿಮ್ಮನ್ನ ಯ್ಯಾವ ಕಾಲಕ್ಕೂ ಮರೆಯುದಿಲ್ಲರ್ರಿ ನಾಳೆ ನಮ್ಮ ಅಶೋಕಪ್ಪ ಹಡದ್ರ ಮೊದಲ ನಿಮ್ಮ ಹೆಸರ ಇಡೂದು.

**ಈಶ್ವರಪ್ಪಾ**— ನೋಡಿದಿಯಾ ಗೌರಾ ಆಗಲೇ ಮೊಮ್ಮಕ್ಕಳನ್ನು ಸಹಾ ಕಾಣಹತ್ತಿದನು ವಳ್ಳೇ ವಿಚಿತ್ರ ಮನುಷ್ಯ ರಂಗಣ್ಣಾ ನಡೆಯಿರಿ ಮೊದಲು ಆನಂದಕ್ಕೆ ಊಟ ಮಾಡುವಾ.

(ಯಲ್ಲರೂ ವಳಗೆ ಹೋಗುವರು)

## ೬ ನೇ ಪ್ರವೇಶ

(ನಿಂಗಿಯು ಹೊಸಶೀರೆವುಟ್ಟುಕೊಂಡು ಅವಸರದಿ ಹೊಂಟಿರುವಳು ಯದುರಿಗೆ)

(ರಾಮನು ಬಂದು ಹಾಯುವನು.)

**ನಿಂಗಿ**— (ಹೊಳ್ಳಿ ನೋಡಿ) ಆಯ್ಯ ಯಾವನವಾ ಮುಲ್ಲಾ! ಮುಂದಿ ಹೆಂಗಸುರು ಕಣ್ಣಿಗೆ ಕಾಣುದಿಲ್ಲೇನು (ಸಮೀಪ ಬಂದ ಶಿವನ ನೀಯೇನ ರಾಮೂ ನಾನು ಯಾರಸ ಮಾಡಿದ್ಯಾ.

**ರಾಮೂ**— ಅ ಲ ಲ ಲ ಯಾರು ನಿಂಗೂ ನೀನೇನ ನಾನು ಯಾರನ್ನ ಮಾಡಿದ್ಯಾ ಅ ಬ ಬ ಬ ಯೇನಿವು ಅಭಾ್ರಟ ಯೇನ ನಿನ್ನ ವನವು ಯೇನಿನ ವ್ಯೆಯಾರ ಯೇನ ಬೆಳಕು ಯೇನ ಥಳಕ ಅ ಲ ಲ ಲ ಅಲ್ಲಾ ಪುಗ್ಗಾನು ತಗದೀವೇಳ (ಹಿಂದನೋಡುತ್ತ) ಅ ಲ ಲ ಲ ಹೆರಪಿನ್ ಚುಂಚಗೊಂಡಿದೇಳ ಇವರಿಗೆ ಬಂದರೂ ಗುರ್ತ ಸಿಗದಾಂಗ ಆಗಿದೆಳ ನಿಂಗೀ ನೀನು ಇಗ ಹೀಂಗ ಕಾಣತೀದಿ ಸುದ್ದ ಸಿನೇಮದಾನ ಡ್ಯಾನ್ಸಿನ ಗೊಂಬಿ ಕಂಡಂಗ ಕಾಣತಿದಿ ಗೊಂಬಿ!

**ನಿಂಗಿ**— ಅಲ್ಲ ರಾಮೂ ನೀನು ಯಾವಾಗಬಂದಿ ಯಾವೂರಿಲಿಂದ ಬಂದಿ ಮೊದಲ ಹೇಳ ರಾಮೂ (ರಮಿಸುವಳು)

**ರಾಮೂ**—ನಾವೂರ ಬಿಟ್ಟುವಂದ ತಿಂಗಳಾತು ರಾಮೂ ಸೀತಾನ ಹುಡಕಾಕ ವನಾ ವನಾ ತಿರಿಗಿದಾಂಗ ನಾನೂ ನಿನ್ನ ಹುಡಕಾಕ ಗಣಾ ಗಣಾ ತಿರಕ್ಯೊಂತ ವಂದವುಪಾಸಾ ಯಡ್ಡುವುನಾಪ ಬಿದ್ದು ವನವಾಸ ಪಟ್ಟು ಇಲ್ಲಿಗೆ ಬಂದೆ ನಿಂಗೀ ನೀನು ನಮ್ಮೂರಬಿಟ್ಟ ಬಂದೀದಿ ಬಂದೀದಿ ನನಗ ಕೂಳುನೀರ ಸವಿ ಹತ್ತವಲ್ದು ಹಿಂದಕ್ಕೆ ನಾನು ನೀನು ಕೂಡಿ ಮೊದಲು ಮಾಡಿದ್ದು ನೆನಪಾತಂದರ ಹಾಡ್ಯಾಡಕೊಂಡು ಅಳೂವಾಂಗ ಆಗುತ್ತ ನನ ಯಂಥಾವನವಾಸಕೆ ಗುರಿಮಾಡಿದೇ ನಿಂಗೀ ( ಅಳುತ್ತ ಕೂಡ್ರುವನು )

**ನಿಂಗಿ**— ( ಅವನ ಮಗ್ಗಲಿಗೆ ಕುತು ರಮಿಸುತ್ತಾ ) ನನಗೂ ಹಾಂಗ ಆಗ್ಯೆತ ರಾಮೂ ಯೇನು ಮಾಡದು ನನಗ ಈ ಗಂಡನೊಂದು ಗಂಟಹಾಕ್ಯಾರಲ್ಲಾ ಹ್ಯಾಂಗರ ಹೋಗಬೇಕು ಮತ್ತ

**ರಾಮೂ**— ಅದೆಲ್ಲಾ ಕರೆ ಈಗನನ ಗಟ್ಟಿ ಉತ್ತರಾ ಹೇಳಿಬಿಡು ನಿನ್ನಾಶೆ ಬಿಡುಅಂದ್ಯೋ ಮತ್ತೋಣರ ದಾರೀ ನನಗೂ ಹಚ್ಚಿಕೊಡತಿದೊ ಅಲ್ಲ ನಿಂಗಿ ( ಸಮೀಪಕ್ಕೆ ಬಂದು ) ಯೇನೇನ ಹೇಳಿದ್ದೀ ಇಬ್ಬರುಕೂಡಿ ವಿಜಾಪುರ ಗೋಳಗುಮಟಾ ನೋಡುನು ಮುಂಬೈಕ ಹೋಗುನು ಮದ್ರಾಸಕ್ಕೆ ಹೋಗುನು ಅಂತಾ ಹೇಳಿ ನನ್ನ ಪರದೇಶಿಮಾಡಿ ನೀನಿನ್ನ ಗುಡನ ಮನ್ಯಾಗ ಬಂದು ಕುಂತಿ ನಮ್ಮ ಗತಿಯೇನು ಅಂತಾ (ಕೈತಿರುತ್ತಾ ಮೈಮುರಿಯುವನು)

**ನಿಂಗಿ**— ಇಕಾನೀಯೇನ ಚಿಂತಿಮಾಡಬ್ಯಾದಾ ಈಗರ ಯೇನಾಗ್ತೆತಿ ನನ್ನ ಗಂಡಗ ಹೇಳಿ ಇಲ್ಲೇ ಯೆಣಾರ ಕೆಲಸಾ ಕೊಡಸ್ತೀನಿ ಅಂದ್ರ ಯಲ್ಲಾರು ವತ್ತಟ್ಟಿಗೆನ ಆಗತೀವಿ ಇಕಾ ನಮ್ಮ ನಮ್ಮಾತನ ಮುಂವ ಇವಾ ನಮ್ಮ ತಮ್ಮ ನಮ್ಮೂರಾತ ಅಂತಾ ಹೇಳತೀನಿ ಇವಾ ಬಂದಾಗ ನೀ ಮಾತ್ರ ನನಗ ಯಕ್ಕಾ ಯಕ್ಕಾ ಅನಕೊಂತ ಇರು ತಿಳಿತಿಲ್ಲೋ ತಿಳಿದೇನ ಮಾಡೀತು ಬಿಡಬಾರದ ನಿಮ್ಮ ಕೆಲ್ಸ ಆಯಿತು ನಿಂಗು ಅಕ್ಕಾ ಅಂದರ ನಮದೇನ ಗಂಟು ಹೊಕ್ಕೈತಿ ಈಗೆಲ್ಲಾ ಹೀಂಗ ನಡದಾವು ವಳಗ ಹಾಂಗ ಹೊರಗ ನೋಡವರ ಕಂಣಿಗೆ ಹೀಂಗ ಬಡರ ಚಿಂತಿಲಕ್ಕ ದಾರೀ ಹುಡಿಕಿದಿ ಅಲ್ಲ ಯೇ ನೀನು ಇವತ ಇಷ್ಟ್ಯಾಕ ಶಿಂಗಾರ ಆಗೀದಿ ಯಾವದರ ಜಾತ್ರಿಗೆ ಹೊಂಟೇರೇನ ಗಂಡಾ ಹೇಣತಿ

**ನಿಂಗಿ**— ಅಯ್ಯ ನಮಗ ಯಡ್ಡ ಲಗ್ನ ವಮ್ಮೇಲೆ ಹತ್ಯಾವ ನಾವು ದುಡಿಯು ಸಾವರ ಮಗಂದು ಡಾವಣಗೇರ್ಯಾಗ ಲಗ್ನ ಮತ್ತು ನಮ್ಮ ಸಾವಕಾರ ಮನ್ಯಾಗ ಅಶೋಕಪ್ಪ ಅಂತಾ ಸಾಲಿಕಲ್ಯಾಕ ಅದಾನ ಅನಂದು ಆಲೂರಾಗ ಮದುವಿ ಆದರೆ ನಮ್ಮ ಹಿರಿಯಾನ ಆಲೂರಿಗೆ ಕರಸ್ತಾರಂತ ನನಗ ಡಾವಣಗೇರಿಗೆ ಕರಕೊಂಡು ಹೋಗಬೇಕು ಅಂತಾ ಹೇಳ್ಯಾರ ತಿಳೀತ ಅದಕ ಇಂಥಾವೆಲ್ಲಾ ಚಲೋಶೀರಿ ಉಟ್ಟೇನ

**ರಾಮೂ**— ನಿಂಗಿ ಡಾಯಲಾಗ

**ರಾಮೂ**— ಅಂತೂ ಅಕ್ಕಾ ಐವಿಗಿತ್ತಿ ಆಗಾಕ ಹೊಂಟಾಳಂದಂಗಾತು ಇಂಥಾ ಅರ್ಭಾಟವಾಗ ನಮ್ಮಂಥವರೇನ ಕಾಣತೀವಿ ನಿನ್ನ ಕಂಡಾಗ ಅ ಲ ಲ ಲ ಯಂಥಾ ಮಿಂಚತೆತಲ್ಲಾ ಈ ಶೀರಿ

ಸಂಗಪ್ಪನು ಜರದ ರುಮಾಲ ಸುತ್ತಿಕೊಂಡು ಗಡಿಬಿಡಿಯಿಂದಾ ಬರುವನು

**ಸಂಗ**— ಅ ಲ ಲ ಲ ನಮ್ಮ ಆಸಾಮಿ ಇಲ್ಲೇ ದಾರ್ಯಾಗ ನಿಂತೈತಲ್ಲಾ ( ರಾಮುನ್ನ ನೋಡಿ ) ಮತ್ಯಾವನ ನಿಂತಾನಲ್ಲಪಾ ಪುಣ್ಯಾತ್ಮಾ ಕೆಟ್ಟ ಕನಸ ಬಿದ್ದದ್ದು ಕರೇ ಆಗುತ್ತಯೇನ ( ಪ್ರಕಟ )ಯೇ ಯಾಕ ಇನ್ನೂ ಗಾಡಿಹೊತ್ತು ಆಗಿಲ್ಲೇನ ನಿನಗ ಇದೇನಿದು ಯಲ್ಲಿದು ಬ್ಯಾಟಿ

**ನಿಂಗಿ**— ನಮ್ಮದು

**ಸಂಗ**— ನಮ್ಮದು ಯ್ಯಾವಾಗ ಬಂತು

**ನಿಂಗಿ**— ಯೇ ಯೇ ಬಂತು ಹೊತು ಅಂತ ಅನ್ನಾಕ ದಸಾಗಿನ ಮಾಡಿ ಯೇನ ಬಾಯತೊಳಕೊಂಡು ನೆಟ್ಟಗ ಮಾತಾಡು

**ಸಂಗ**— ಅ ಬ ಬ ಬ ಯಪ್ಪಸಿಟ್ಟಗೆತ್ತು ನೋಡ್ರಿ ನಮ್ಮ ಆಸಾಮಿ ಯೇನಿಂಗಿ ಮತ್ತೇನ ಅನಬೇಕು

**ನಿಂಗಿ**— ಯಾವಾಗ ಬಂದರು ಯಾವ ಉರಿನವರು ಅಂತಾ ಚಂದಾಗಿ ಕೇಳು ಇಲ್ಲಾಂದ್ರ ಯಲ್ಲೆ ಬೇಕೆಲ್ಲೆ ತಿವದೇನ

**ಸಂಗ**— ಹೀಂಗೇನ ಹಾಂಗಾರ ಆಗಲಿ (ಹೆಣಸೋಗಿನ ಪದ್ಧತಿಯಂತೆ) ಯೇನ್ರಿ ಹೆಣ್ತಿಯವರೇ ಇವರು ಎಲ್ಲಿಂದಾ ಬಂದರು ಯಾವೂರಿನವರು ಇವರ ಹೆಸರೇನು ಚನ್ನಾಗಿ ಹೇಳುವಂತವಳಾಗು ನಾರೀ ವಯ್ಯಾರಿ

**ರಾಮೂ**— ಯಕ್ಕಾ ಮಾಮಾ ಹಿಂಗ್ಯಾಕ ಮಾಡತಾನವಾ

**ನಿಂಗಿ—** ಅವ ಹಂಗಯೇಳ ಹಿರೇ ಆಟದಾಗ ಹೆಣಸೋಗ ಕಟ್ಟ್ಯಾನ ಅದಕ ಹಂಗ ಮಾತಾಡತಾನ

**ರಾಮೂ—** ಮಾವಾ ವಂದ ಪದಾನರ ಅನ್ನಪ್ಪಾ

**ಸಂಗನಪದಾ—** ದೊಡ್ಡ ಆಟದ ನಮೂನಿ ಪದಾ ಮುಟ್ಟ ಬೇಡವೊ ರಾಜಾ ದುಷ್ಟ ಮನುಜಾ ನೀನು ಕೆಟ್ಟು ಹೋಗುವಿಯೋ ಮನುಜಾ ಮನುಜಾ (ಯೇರು) ಮುಟ್ಟಬೇಡವೋ ರಾಜಾ

**ನಿಂಗಿ—** ಹೀಂಗ ಬಾರ ದಾರಿಗೆ ಇವಾ ನಮ್ಮ ಊರಾವ ಇವನ ಹೆಸರು ರಾಮು ಪಾಪ ತಂದಿ ಇಲ್ಲಾ ತಾಯಿ ಇಲ್ಲಾ ಯ್ಯಾರು ಬಳಗದವರಿಲ್ಲಾ ಇವಾ ನಮ್ಮವೂರಾಗ ಹಗಲಿಲ್ಲಾ ನಮ್ಮ ಮನ್ಯಾಗ ನನಗ ಯಕ್ಕಾ ಯಕ್ಕಾ ಅಂತಾ ನನಕೂಟ ಇರತಿದ್ದಾ ಪಾಪ ಪರದೇಶಿ ಹುಡುಗಾ ಬಾಳ ವಳ್ಳೇದು ಯೇನ ಮಾಡಬೇಕು ನಸೀಬ ಕೆಟ್ಟಐತಿ ಅಲ್ಲೇನ ಯಾವೂ ಕೆಲಸ ಸಿಗಲಿಲ್ಲಂತ ಅದಕ ಅಕ್ಕನ ನೆನಪ ಆಗಿ ಅತಗೋತ ನನ್ನ ಹುಡಕೋತ ಬಂದಾನ ನನ್ನ ಮ್ಯಾಲಿಂತೂ ಬಿದ್ದ ಸಾಯತಾನ ಹೌದಲ್ಲ ತಮ್ಮಾ

**ರಾಮೂ—** ಹೌದ ನಿಂಗು ಅಕ್ಕಾ

**ಸಂಗ—** ಹೂ ಹೀಂಗ ತಿಳಿತು ಅಕ್ಕನ ವಿಷಯಾ ಪಕ್ಕಾ ತಿಳೀತು ಅಲ್ಲ ನಿಂಗು ಈ ನಿಮ್ಮ ತಮ್ಮ ನಿನ್ನ ಮಾತಾಡಿಸಿ ವೂರಿಗೆ ಹೋಗವನ ಯೇನ ಇಲ್ಲೇ ದ್ವಜಾಯೇರಿಸವನ

**ನಿಂಗಿ—** (ಸಂಗಪ್ಪನ ಹತ್ತರ ಬಂದು ರಮಿಸುವಳು) ಇಲ್ಲೋಡ ಇಕಾ ನಂದೊಂದು ಮಾತು ಅಯಿತಿ ಕೇಳತಿಯಾ ಇವಗ ಇಲ್ಲೇಯಲೆರ ವಂದು ದಗದಾಕೊಡಿಸಿ ದುಡಿಯಾಕ ಹಚ್ಚು ಪಾಪ ಇವ ಪರದೇಶ ಹುಡಗ ದಾರಿಗೆ ಹಚ್ಚಿದರೆ ನಿನಗೂ ಪುಣ್ಯ ಬರತ್ತ ನನ್ನ ಹೊಟ್ಟೆಲೆ ಇಂಥಾ ಗಂಡು ಹುಟ್ಟಿತ್ತು ವಂದು ಘಳಿಗಿ ಕೂಡಾ ನನ್ನ ಬಿಟ್ಟು ಇರುವದಿಲ್ಲ ನಮ ತಮ್ಮ ಬಂಗಾರದಂತವ ಮತ್ತು ಇವಂಗ ಯೇನರ ಅನ್ನಾಕ ಹೋಗಬ್ಯಾಡಾ ತಿಳಿತಿಲ್ಲ ನನ್ನಮಾತು

**ಸಂಗ—** ( ವಿಚಾರಿಸಿ ಹಾ ತಿಳಿದಂಗಾತು ಅಲ್ಲಾ ಇವನ್ನೊಂದು ನನಗ ಜೋಡ ಮಾಡಿದ್ಯಾ ನಿಂಗೀ ಯಮ್ಮಿಕಟ್ಟತೀನಿ ಯಮ್ಮಿಕಟ್ಟತೀನಿ ಅಂತಾಹೇಳಿ ಕಡಿಗೆ ಈ ತಮ್ಮನ ಕಟ್ಟಿದ್ಯಾ ಇಕಾ ನೋಡು ಕೆಟ್ಟಕಾಲ ನಂಬಾಕ ಹೋಗ

ಬ್ಯಾಡಾ ಈ ತಮ್ಮನಗೋಳು ಯಕ್ಕಾ ಯಕ್ಕಾ ಅಂತ ಹೇಳಿ ಕಡಿಗೆ ಆಕ್ಕನ ಹೊಡಕೊಂಡು ಹೋಕ್ಕಾರ ಬಲು ಯಚ್ಚರ ಬ್ಯಾಡಾ ಅಂತೀನಿ ಇದರ ವ್ಯಾಗ ನಿನ ಮನಸು

**ನಿಂಗಿ**— ( ಅಳುವ ಸ್ವರದಿಂದ ) ಇಕಾ ನನ್ನಮಾತ ಕೇಳದಿದ್ದರ ನಮ್ಮ ತಮ್ಮನ ಸಲುವಾಗಿ ಬಾವೀನ ಬೀಳತೀನಿ ನೋಡು ಮತ್ತ

**ಸಂಗ**— ಯೇ ಯೇ ಸೋರಗಂಡಿನನಾರಿ ಯಾಕ ಚಿಟಬರಸ್ತಿದೇ ಮನ್ಯಾಗ ಇಟಕೋ ಯಾ ಹೊತ್ತಿನ್ಯಾಗ ಭೆಟ್ಟಿ ಆದ್ಯೋ ನನ್ನ ಬಹೂದ್ಧರ ಆಳಿಯಾ ಬಾರಪಾ ಕಡಿಗೆ ನೀನು ನನ್ನ ಅಳಿಯಾ ಅಳಿಯ್ಯಾ ಅಂದರ ನೀನ ನನ್ನ ಅಳಿಯ್ಯಾ ಅಂತಾ ಬಾ ಬಾ ಜೋಡ ಆದೆಲ್ಲಾ

**ನಿಂಗಿ**— ( ನಗುತ್ತಾ ) ಇಕಾ ನೀನು ಅಶೋಕಪ್ಪನವರ ಮದುವಿಗೆ ಹೋಗು ನಾನು ನನ್ನ ತಮ್ಮನ ಕರಕೊಂಡು ರಘಪ್ಪನ ಲಗ್ನಕ್ಕ ಹೊಕ್ಕೀನಿ ಬಾ ಬಾರ ತಮ್ಮ ಗಾಡಿ ಹೊತ್ತು ಆಗತ್ತ

**ರಾವೂ**— ನಡೀಯ ನಿಂಗುಅಕ್ಕಾ ಹೋಗುನು

**ನಿಂಗಿ**— ( ಹೋದಂತೆ ಮಾಡಿ ಮತ್ತೆ ಹೊಳ್ಳಿ ) ಇಕಾ ಮನೀ ಕೀಲಿ ಹಾಕಿ ಮನೀ ಮಗ್ಗಲದವರ ಕೈಗೆ ಕೈ ಕೊಟ್ಟೆ ಬಂದಿನಿ.

**ಸಂಗ**— ಹಾ ಅಲ್ಲೀ ಕೈ ಕೊಟ್ಯಾ ಯೇನ ಅಡ್ಡಿಯಿಲ್ಲಾ ಇದ್ದರ ನಿನ್ನಂತಾಕಿ ಇರಬೇಕು ಹೆಳವರ ಕುಲದಾಕ

**ನಿಂಗಿ**— ಯೇ ಯೇ ಯೇನರ ಅಂತಿಯಲ್ಲ ಕೈ ಅಂದರ ಬೀಗದ ಕೈ ಕೊಟ್ಟೇನಿ ಅಂದೆ ಛೀ ಯಂಥಾ ಶಂಸದ ಗಂಡಸ ಅದಿದೇ

( ನಿಂಗಿ ರಾವೂ ಹೋಗುವರು )

**ಸಂಗ**— ಅಂತೂ ಈ ತಮ್ಮ ಮನಿ ಸೇರಿದ್ಯಾ ನನಗ ಕೆಟ್ಟ ಕನಸು ಬಿದ್ದಾಗ ತಿಳಕೊಂಡಿದ್ದೆ ಯೇನ ಆಗತ್ತ ಅಂತ ಅಕ್ಕನು ತಮ್ಮನು ಕೂಡಿ ಯಾವ ಹೊಳಿಕಾಣಸ್ತಾರೋ ಶಿವನ ಬಲ್ಲಾ ಆಲೂರ ಮದುವಿಯಂತೂ ಮುಗಿ ಸಿಕೊಂಡು ಬರತೀನಿ ಆ ಬಳಿಕ ಆಯಿತ ನನಗ ನನ್ನ ಅಳಿಯ್ಯಾಗ

# ೭ ನೇ ಪ್ರವೇಶ

ಮಲ್ಲಪ್ಪನವರ ಮನೆ ಲಗ್ನ ಶಿದ್ದತೆ ರಂಗಪ್ಪ ಸಂಗಪ್ಪ ಅಶೋಕ ಸುಶೀಲಾ ಭಟ್ಟರು ಇನ್ನಿತರ ಜನರು ಅಶೋಕಾ ಸುಶೀಲಾ ಮದುಮಕ್ಕಳಾಗಿ ಕುಳಿತಿರುವರು

**ಮಲ್ಲೇಶಪ್ಪ**— ರಂಗಪ್ಪನವರೇ ಅಕ್ಕೀಕಾಳಿನ ಮುಹೂರ್ತವು ಸಮೀಪಿಸಿರುವದು ಕಾರಣ ತಾವು ಈ ಕಾರಣಕ್ಕೆ ಅನುಮತಿ ಕೊಡಬೇಕಲ್ಲಾ

**ರಂಗಪ್ಪ**— ಮಲ್ಲೇಶಪ್ಪನವರೇ ನಾ ವೇ ನು ಹೊಸಬೀಗರೆಂದು ಎಷ್ಟೊಂದು ಕೇಳುವಿರಿ ಯತ್ತಾದರೂ ಅಕ್ಕೀಕಾಳ ಬಿದ್ದರೆ ಸಾಕು ಜೇಗ ಕಾರ್ಯ ಮುಗಿಸಿರಿ

**ಮಲ್ಲೇಶಪ್ಪ**— ಆಗಲಿ ಕೇಳಿದಿಯಾ ಮಲ್ಲು ನಿಮ್ಮಣ್ಣನ ಮಾತು ಯಲ್ಲ ಮಾತು ನಮ್ಮ ಮೇಲೆಯೇ ಹೊರಿಸುವನು ಇನ್ನು ತಡಮಾಡಬೇಡಾ ಸುಶೀಲವ್ವನಿಗೆ ದಂಡೆಯನ್ನು ಕಟ್ಟಿರಿ

**ಮಲ್ಲಪ್ಪ**— ಹಾಗೇ ಆಗಲಿ ಯಜಮಾನರೇ ಆದಷ್ಟು ಜೇಗ ಅಕ್ಕೀ ಕಾಳ ಬೀಳುವಂತೆ ಮಾಡಿರಿ

ಮದುವಕ್ಕಳಿಗೆ ದಂಡಿ ಕಟ್ಟಿ ಹೂಮಾಲೆ ಹಾಕುವರು ಯಲ್ಲರಿಗೂ ಅಕ್ಕಿಕಾಳ ಕೊಡರಿ

ಭಟ್ಟರು ಮಂತ್ರ ಅನ್ನುವರು
ತದೇವಲಗ್ನಂ ಸುಮೀನಂತೂದೇವಾ
ತಾರಾಬಲಂ ಚಂದ್ರಬಲಂತುದೇವಾ
ವಿದ್ಯಾಬಲಂ ದೈವಬಂಲಂತುದೇವಾ
ಸುಮೂರ್ತಿ ಸಾವಧಾನ
ಅಕ್ಕೀಕಾಳು ಹಾಕುವರು
ಯಲ್ಲ ಜನರು ಭಟ್ಟರು ಹೋಗುವರು

**ಸಂಗಪ್ಪ**— ಯಪ್ಪ ಇನ್ನ ತಡಾ ಮಾಡಬ್ಯಾಡ್ರಿ ಲಗೂನ ವುಟಾಮುಗಿಸಿಕೊಂಡು ವೂರಿಗೆ ಹೋಗುನರ‍್ರಿ ಗಾಡೀ ಹೋದಗೀದಿತು ಆದಷ್ಟು ದೌಡ ದೌಡ ಕೆಲ್ಸಾ ಮುಗಸರಿ

**ಅಶೋಕ**— ಸಂಗಪ್ಪ ಹೀಗೆಲ್ಲಾ ದುಡಕಬೇಡಾ ದುಡುಕು ಬಲು ಕೆಡಕು ಅಂತಾ ವೇದವಾಕ್ಯವದೆ ಯಜಮಾನರ ಆಶೀರ್ವಾದ ಪಡೆದು ವೂರಿಗೆ ಹೋಗುವಾ

**ಸಂಗ**— ಆಗಲ್ರಿ ಯಪ್ಪಾ ನಮಗ ಇದೆಲ್ಲಾ ಹ್ಯಾಂಗ ಗೊತ್ತಾಗಬೇಕು ನಿಮ್ಮ ಮನಸಿಗೆ ಬಂದಾಗ ಮಾಡ್ರಿ

**ಅಶೋಕ**— ಅಪ್ಪಾ ನೀನು ಮೊದಲಿನ ಗಾಡಿಗೆ ವೂರಿಗೆ ಹೋಗಿ ತಂದೆ ಈಶ್ವರಪ್ಪನವರಿಗೆ ಅಶೋಕನು ತನ್ನ ಸತಿಯೊಡನೆ ಹಿಂದಿನ ಗಾಡಿಗೆ ಬರುವನೆಂದು ತಿಳಿಸು ನಿನ್ನ ಸಂಗಡ ಸಂಗಪ್ಪನನ್ನು ಕರೆದುಕೊಂಡು ಹೋಗಿ ನಮ್ಮ ಹೊಸ ಬಿರಿಡಿಂಗಿನಲ್ಲಿ ಯಲ್ಲ ಸುವ್ಯವಸ್ಥೆಮಾಡಿಸು ತಿಳಿಯಿತೆ

**ರಂಗಪ್ಪ**— ಹಂಗ ಆಗಲಪಾ ಮಲ್ಲೇಶಪ್ಪನವರೇ ನಮಗೆ ಇನ್ನ ಅಪ್ಪಣೆ ಕೊಡ್ರಿ

**ಮಲ್ಲೇಶಪ್ಪ**— ರಂಗಪ್ಪನವರೇ ವೂಟ ಮುಗಿಸಿಕೊಂಡು ವೂರಿಗೆ ಹೋಗುವಿರಂತೆ ಸುಶೀಲವ್ವನು ನಮ್ಮ ಮಗಳಲ್ಲಾ ನಿಮ್ಮ ಮಗಳು ಅವಳ ಭಾರವೆಲ್ಲವೂ ನಿಮ್ಮ ಮೇಲೆ ಇದೆ ಯೇಳಿರಿ ವೂಟಕ್ಕೆ

**ರಂಗಪ್ಪ**— ಅದರ ಕಾಳಜಿ ಬಿಡ್ರಿ ಸುಶೀಲವ್ವನು ನಮ್ಮ ಮಗಳುಅಂತಾ ಜ್ವಾಪಾನ ಮಾಡತೀನ್ರಿ ನಿವ್ಹೇನು ಚಿಂತಿಮಾಡಬ್ಯಾಡ್ರಿ ಯಲ್ಲರೂ ವಳಗೆ ಹೋಗುವರು

ರಸ್ತಾ ಪ್ರವೇಶ ಚಂದ್ರು ಸಿಗರೇಟ ಸೇದುತ್ತಾ ಪ್ರವೇಸಿಸುವನು

ಪದಾ

ಹೊಸದಾದ ರಂಗದೊಳು ನಾತರುಣಿಸಹಿತ
ದಂಗನಾದೆನಾ ಇರಂಗವನಾ
ಭಂಗ ಗೊಳಿಸುವೆ ಇಂಗಿತವನು
ಬಹಿರಂಗ ಗೊಳಿಸುವೆನಾ

ಮಾತು ಯೇನು ನನ್ನ ಮಿತ್ರ ಸಾದರಘು ಡಾವಣಗೇರಿಯ ಆಗರ್ಭ ಶ್ರೀಮಂತರ ಅಳಿಯನಾದಲ್ಲಾ ಅಹಹಾ ಅವನ ಕೈ ಹಿಡಿದ ಮೀರಾ ಯೇನವಳ ಸೌಂದರ್ಯ ಯೇನವಳ ರೂಪಾ ಹೇಗಾದರೂ ಮಾಡಿ ನನ್ನ ಬಲೆಯಲ್ಲಿ ಹಾಕಿ ಕೊಳ್ಳಬೇಕು ಇದಕ್ಕೊಂದು ಕುತಂತ್ರ ಹೂಡಿ ಆ ಬೇಟೆಯನ್ನು ಹೊಡಯು

ಬೇಕು ಮೊದಲು ಆ ರಘುವಿನೊಡನೆ ಅತಿ ಸ್ನೇಹಗಳಿಸಿ ಅವನ ತಂದೆಯನ್ನು ವಂಚಿಸಿ ಮೀರಾವತಿಯನ್ನು ರಮಿಸಿ ನನ್ನ ಕಾರ್ಯ ಸಾಧಿಸಿಕೊಳ್ಳುವೆ ಅಂದರೆ ನನ್ನ ಕಾಮೋತ್ಪತ್ತಿಯು ಸಾಂತವಾಗುವದು ಇಗಿಂದೀಗಲೇ ರಘುವಿನೊಡನೆ ಆವರ ಮನೆಗೆ ಹೋಗುವದೇ ಎನ್ನಂತ ರಂಗದ ಕಾರಸ್ಥಾನ ( ನಗುತ ಹೋಗುವನು )

## ೮ ನೇ ಪ್ರವೇಶ

ಈಶ್ವರಪ್ಪನ ಮನೆ ಕುರ್ಚಿ ಟೇಬಲ ಹಾಕಿರಬೇಕು

**ಸಂಗ**— (ಕುರ್ಚಿವರಿಸುತ್ತಾ) ದೊಡ್ಡವರ ಮನಿಮದುವೆ ಮುಗದರೂ ಅದರ ಮಜಾನ ಮೂರು ತಿಂಗಳಾದರೂ ಮುಗದಿಲ್ಲಾ ಅದರಾಗ ಇವತ್ತ ನೊಡಿದ್ರ ಟೀಪರಟೀಲುಟ್ಟಾರ ಎಲ್ಲಾ ದೊಡ್ಡ ದೊಡ್ಡ ಜನಾಬರುತ್ತಾ ಕಂಡಾ ಪಟಿ ಕೆಲಸಾ ಅದಾವು ಇವಳ ನೋಡಿದ್ರ್ಯಾ ಇನ್ನೂ ಬರಲಿಲ್ಲಾ ಅಪಾಯಲ್ಲ ತಮ್ಮ ಜೋಡಾದನೊ ಏನೋ ಹೊನ್ನು ಹೆಂಣು ಮಂಣು ಇವ್ರು ಮುರು ಚಲೋ ಸಿಗಬೇಕಾದರೆ ಮುಕ್ಕಂಣನ ಕುರಪಾ ಬೇಕಂತ ನಿಜಾ ಹೆಂಣಿನ ನೆಲಿ ಕುದರಿ ನೆಲಿ ನೀರಿನನೆಲ ಸಿಗೂದಿಲ್ಲಾ ಅಂತಾರ ಅದುರದೇ ಕೀನ ಆಗಲಾಗಲೀ ಯೇನನ ನಮ್ಮ ಹಣೇಬಾರವಾಗ ಅಯಿತಿ ಅದೆಲ್ಲಾ ಆಗಲಿ

**ಗೌರಾ**— ( ವಳಗಿಂದಾ ಬಂದು ) ಸಂಗಪ್ಪಾ ಇನ್ನೂ ನಿನ್ನ ಹೆಂಡತಿ ಬರಲಿಲ್ಲ ವೇನಪ್ಪಾ

**ಸಂಗ**— ಇನ್ನೂ ಬಂದಿಲ್ರಿ ತಮ್ಮನ ಚಹಾ ವೂಟಾ ಯಲ್ಲಾ ಮುಗಿಸಿ ಬರಬೇಕಲ್ರಿ

**ಗೌರಾ**— ಸಂಗಪ್ಪಾ ನಿಮ್ಮ ಮನೆಗೆ ಯಾವನೋವಬ್ಬನು ಬಂದಿರುವ ನಂತಲ್ಲಾ ನಿಮಗೆ ಸಮ್ಮಂಧಿಕನಾಗ ಬೇಕೇನು

**ಸಂಗ**— ಅದುಯೇನೋ ನನಗೂ ತಿಳಿಯುವದಿಲ್ರಿ ಆರೆ ತಮ್ಮ ಅಂತಾ ಮನಿಸೇರಿ ಕಮ್ಮ ಕಮ್ಮಂದ ತಿನಕೊಂತ ಕೆಮ್ಮಕೊಂತ ಕುಂತಾನ್ರಿ

**ಗೌರಾ**— ಸರಿ ಇತ್ತೀಚೆಗೆ ಅವಳ ರೀತಿಯೇ ಬದಲಾಯಿಸಿದಂತೆ ಕಾಣು ತ್ತದೆ ಇರಲಿ ಒಮ್ಮೆ ಚನ್ನಾಗಿ ಬುದ್ಧಿ ಹೇಳುತ್ತೇನೆ

( ಸಿಂಗವ್ವನು ಅವಸರದಿ ಬರುವಳು )

**ಸಂಗ—** ಬಂದ್ಲಲ್ರಿ ನೋಡ್ರಿಯವ್ವಾ ಯೇತಮ್ಮನಚಾಕರಿ ಮುಗಿಸೇ ಬಂದ್ಯಾ ಇಗ್ಯಾಕ ಇಷ್ಟು ಲಗುನ ಬಂದಿ ಪಮ್ಮೇಲೆ ಹೊತ್ತು ಮುಳಗಿ ಬರ ಬೇಕಾಗಿತ್ತು ಹೊಳ್ಳಿ ಮನೆಗೆ ಹೊಕ್ಕಿದ್ದಿ

**ನಿಂಗಿ—** ಅಗಲೇ ಬರತಿದ್ದೆ ನಮ್ಮ ತಮ್ಮಗ ನೀರ ಬಡ್ಲಿ ಆಗಿ ನೆಗಡಿ ಆದಂಗಾಗಿತ್ತು ಆದರೆ ಆವಗ ಕಾಪಿಮಾಡಿ ಕುಡಿಸಿ ಬಂದೆ ಯವ್ವಾ

**ಸಂಗ—** ಯೇ ಯೇ ಆ ಸಾಡೇಸಾತ ನನಗ ಮುಗಿಸೇ ಹೋಗುವಾಂಗ ಕಾಣತ

**ಗೌರಾ—** ನಿಂಗವ್ವಾ ನೀನು ಹೀಗೆಲ್ಲಾ ಮಾಡಿದರೆ ನಮ್ಮಲ್ಲಿಗೆ ಕೆಲ ಸಕ್ಕೆ ಬೇಡಾ ಇವರೆಗೂ ವುತ್ತಮಳೆಸಿಸಿಕೊಂಡು ಈಗ ಮನಬಂದಂತೆ ವರ್ತಿಸ ಹತ್ತಿರುವಿ ನಿನಗೆ ಯಾರ ಭೀತಿಯು ಇಲ್ಲದಾಗಿದೆ ನೋಡು ನಿನ್ನಿಷ್ಟ ಬಂದಂತೆ ಮಾಡು ದುಡಿಯಲು ಬೇಸರಾಗಿದ್ದರೆ ಮನೆಗೆ ಹೋಗಿಬಿಡು

**ನಿಂಗಿ—** ಇಲ್ರಿ ಯವ್ವಾ ಇನ್ನೊಮ್ಮೆ ಹೀಂಗ ತಡಮಾಡಿ ಬರೂದಿಲ್ಲರ್ರಿ ಇದು ವಂದಸಾರೆ ನನಗೆ ಸಮೂಮಾಡ್ರಿ

**ಗೌರಾ—** ನಮ್ಮ ರಘುವಿನ ಮದುವೆಮಾಡಿಕೊಂಡು ಬಂದದ್ದಕ್ಕಾಗಿ ಈದಿನ ಮನೆಯಲ್ಲಿ ಪಾರ್ಟಿ ಇಟ್ಟಿದ್ದಾರೆ ಬೇಗ ಬೇಗ ಕೆಲಸ ಮಾಡುನಡೆವಳಗೆ

( ನಿಂಗವ್ವಾ ಸಂಗಪ್ಪಾ ವಳಗೆ ಹೋಗುವರು )

**ಈಶ್ವರಪ್ಪಾ—** (ಪ್ರವೇಶಿಸಿ) ಗೌರಾ ಎಲ್ಲಾ ಸಿದ್ಧತೆ ಆಯಿತೇನು ಆ ಮಂತ್ರಿತರು ಬರುವ ಸಮಯವಾಯಿತು.

**ಗೌರಾ—** ಯಲ್ಲವೂ ಆಗಿದೆ ಇನ್ನು ನಾನು ಶಿವಪೂಜೆ ಮುಗಿಸಿಕೊಂಡರೆ ತೀರಿತು.

**ಈಶ್ವರಪ್ಪಾ—** ಮೊದಲು ಫಲಹಾರದ ವ್ಯವಸ್ಥೆ ಮುಗಿಸಿರಿ ಗೌರು ಯಾವಾಗಲೂ ಶಿವಪೂಜೆ ಶಿವಭಜನೆ ಅಂತಾ ಸಾಯುತ್ತಿರುವಿ ಇನ್ನಿತರ ಪರವೇ ಇಲ್ಲಾ (ವೇಳ್ಯ ನೋಡುತ್ತಾ) ಹಾಂ ಮರತಿದ್ದೆ ಈ ದಿನ ಅಶೋಕನು ತನ್ನ ಸತಿಯೊಡನೆ ಇಲ್ಲಿಗೆ ಬರುತ್ತಾನಂತೆ ತಿಳಿಯಿತೆ

**ಗೌರಾ—** ಹೀಗೋ! ಚನ್ನಾಯಿತು ಇದು ವಂದು ಆನಂದದ ಸುದ್ದಿ ನಾನೂ ಬೇಗ ಪೂಜಾ ಮುಗಿಸುತ್ತೇನೆ.

( ವಳಗೆ ಹೋಗುವಳು )

( ವಬ್ಬಬ್ಬರಾಗಿ ಎಲ್ಲ ಜನರು ಬರುವರು )

ಜನರು ನಮಸ್ಕಾರ ನಮಸ್ಕಾರ

**ಈಶ್ವರಪ್ಪಾ**— ನಮಸ್ಕಾರ ನಮಸ್ಕಾರ ಬರಬೇಕು ಬರಬೇಕು.

**ಶೆಟ್ಟರು**— ನಮಸ್ಕಾರ ಇಶ್ವರಪ್ಪನವರೇ ನಮಸ್ಕಾರ.

**ಈಶ್ವರಪ್ಪಾ**— ಬರಬೇಕು ಶೆಟ್ಟರು ಬರಬೇಕು ನಮಸ್ಕಾರ.

( ಎಲ್ಲರೂ ಕುಳಿತನಂತರ )

**ಈಶ್ವರಪ್ಪಾ**— ಬಾ ಚಂದ್ರಶೇಖರಾ ಕುಳಿತುಕೋ

**ಚಂದ್ರು**— ಆಗಲಿ ಸಾವುಕಾರರೇ

**ರಘು**— ಚಂದ್ರಶೇಖರಾ ಕುಳಿತುಕೋ (ವಳಗೆ ಹೋಗುವನು)

**ಚಂದ್ರು**— ಓಹೋ ಪ್ರೀಯ ತನಯ ಮುಖವನ್ನು ಕಾಣದೆ ಬಹಳ ಹೊತ್ತಾಯಿತ್ತೇನು ಪಾಪ ವಯಸ್ಸಿನ ಹುಡುಗ ಹೋಗಲಿ ಹೋಗಲಿ.

**ಶೆಟ್ಟರು**— ಇಶ್ವರಪ್ಪನವರೇ ಮದುವೇ ಬಹಳ ಅಭ್ರಾಟವಾಯಿ ತಂತಲ್ಲಾ.

**ಚಂದ್ರು**— ಶೆಟ್ಟರೇ ಬೀಗರು ನಮ್ಮನ್ನು ಕಂಡಾಕ್ಷಣವೇ ಹೌಹಾರಿ ಬಿಟ್ಟರು ನಮ್ಮ ಅಳಿಯನಿಗೆ ಹೆದರಿ ಬಾಗಿ ನಡಿವರು ಪಾಪ ನಮ್ಮ ರಘು ಇವನೇನು ಸಾಮಾನ್ಯನೇ ಅಳೀಯ ಭೂಪತಿ

( ರಂಗಪ್ಪನು ಪ್ರವೇಶಿಸಿ )

**ರಂಗಪ್ಪಾ**— ನಮಸ್ಕಾರ್ರಿ ಯಪ್ಪಾ ನಮಸ್ಕಾರ ಯಲ್ಲರಿಗೂ ನಮ ಸ್ಕಾರ್ರಿ.

**ಇಶ್ವರಪ್ಪಾ**— ನಮಸ್ಕಾರ ಬಾ ರಂಗಪ್ಪಾ ಇದೇನು ರಂಗಪ್ಪಾ ವಬ್ಬನೇ ಬಂದೆಯಲ್ಲಾ ಮದುಮಕ್ಕಳು ಯಲ್ಲಿರುವರು.

**ರಂಗಪ್ಪಾ**— ಯಪ್ಪಾ ಅವರು ಹಿಂದೆ ಬರಹತ್ತಿದ್ದಾರೆ ಸುದ್ದಿ ಸಾರಲು ನನಗೆ ಮುಂದೆ ಕಳಿಸಿದ್ದಾರೆ ಮಕ್ಕಳಿಗೆ ಮದುವೆ ಮಾಡಿದೊಡನೆ ಗೌಡಕಿ ಪಟವನ್ನು ಅವರಿಗೆ ಕೊಟ್ಟು ವಾಲೀಕಾರರಂತೆ ನಾವು ಇರಬೇಕಲ್ರಿ

**ಚಂದ್ರು**— ವಾಹಾ! ವಾಹಾ! ವಳ್ಳೇ ಮುದುಕಾ ಸರಿಯಾದ ಪುತ್ರರ ವನ್ನೇ ಕೊಟ್ಟನಲ್ಲಾ.

( ಅಶೋಕಾ ಸುಶೀಲಾ ಇವರ ಪ್ರವೇಶ )

**ಇಶ್ವರಪ್ಪಾ**— ಬಂದರಲ್ಲಾ ನವದಂಪತಿಗಳು ಬಾ ಅಶೋಕಾ ಗೌರಾ ಬೇಗ ಹೊರಗೆ ಬಾರೇ ನಿನ್ನ ಚಿಕ್ಕ ಸೊಸೆಯು ಬಂದಿದ್ದಾಳೆ.

**ಗೌರಾ**— (ವಳಗಿನಿಂದಾ ಬಂದು) ಬಾ ಅಮ್ಮಾ ಸುಶೀಲಾ ಬಾ ಹೀಗೆ ಅಶೋಕಾ ನನ್ನ ಸೊಸೆ ಚನ್ನಾಗಿದ್ದಾಳೆ ಇವಳಿಗೆ ತಕ್ಕ ವರಾ ನೀನೇ ಅಲ್ಲವಪ್ಪಾ

**ಅಶೋಕ**— ಹೌದಮ್ಮಾ ಚನ್ನಾಗಿದೆ ನನ್ನ ಭವಿಷ್ಯ ಅಂತೇ ಈ ಹಳ್ಳಿಯ ಮಳ್ಳನ್ನೊಂದು ಗಂಟು ಹಾಕಿದ್ದಾರೆ ನನ್ನೊಡನೆ ಬರಲು ಇವಳಿಗೆ ನಾಚಿಕೆಯಾಗುವವಂತೆ ಅದಕ್ಕಾಗಿ ಮೂರು ಮೂರು ಸರಿದೇ ಬಂದಳು ಇವಳನ್ನು ಇಲ್ಲಿಗೆ ಕರೆದುಕೊಂಡು ಬರಬೇಕಾದರೆ ತಿರುಪತಿಯ ತೇರನ್ನೆಳತಂದಂತಾಯಿತು

**ಗೌರಾ**— ರೂಪದಲ್ಲಿ ರಂಭೆ

**ಅಶೋಕ**— ಆದರೂ ಬುದ್ಧಿ ಇಲ್ಲದ ಗೊಂಬೆ

**ಇಶ್ವರಪ್ಪಾ**— ನೀನು ಯೇನಂದರೂ ಸಿಟ್ಟಿಲ್ಲ ನಮ್ಮ ಸೊಸೆಗೆ

**ಅಶೋಕ**— ಯಾಕೆ ಗೊತ್ತೆ! ಮದುವೆಯಲ್ಲಿ ಇವಳ ತಂದೆ ತಾಯಂದಿರು ನನಗೇನು ಕೊಟ್ಟಿಲ್ಲಾ (ಯಲ್ಲರು ನಗುವರು) ನೋಡಿರಿ ಅತ್ತೆ ಮಾವಂದಿರಿಗೆ ನಮಸ್ಕಾರ ಮಾಡಲು ಬುದ್ಧಿ ಇದಿಯೇ ಇವಳಿಗೆ

**ರಂಗಪ್ಪಾ**— ಸುಶೀಲವ್ವಾ ಹಾಂಗ ನಿಂತಿಯಲ್ಲವ್ವಾ ಯಲ್ಲ ಗುರು-ಹಿರಿಯರಿಗೆ ನಮಸ್ಕಾರ ಮಾಡಿ ವಳಗೆ ಹೋಗಮ್ಮಾ

( ಸುಶೀಲಾ ಯಲ್ಲರಿಗೂ ನಮಸ್ಕರಿಸಿ ವಳಗೆ ಹೋಗುವಳು )

**ಗೌರಾ**— ಅಶೋಕಾ ಹೀಗೆಲ್ಲಾ ಸಿಟ್ಟಿಗೇಳಬಾಪ್ಪಾ ಪಾಪ ಹಳ್ಳಿಯಲ್ಲಿ ಜೀವನ ಸಾಗಿಸಿದ ಹುಡಿಗೆಯರಿಗೆ ಶಹರದಲ್ಲಿಯ ರೀತಿ ನೀತಿ ತಿಳಿದಿರುವದಿಲ್ಲಾ ನೀನೇ ಅವಳಿಗೆ ನಿತ್ಯ ಹೇಳುತ್ತಾ ಸುಧಾರಿಸಿಕೊಂಡು ಹೋಗು ಅವಳಿಗೆ ತಿಳಿಯದಿದ್ದನ್ನು ತಿಳಿಸಿಕೊಡಬೇಕು ಬಾರದಿದ್ದನ್ನು ಕಲಿಸಬೇಕು ಯಲ್ಲರೂ ವಮ್ಮೆಲೇ ಕಲಿತು ಭೂಮಿಗಿಳಿದಿರುವಲ್ಲಾ ಪಾಪ ಇವಳ ಮುಖಲಕ್ಷಣವೇ ಹೇಳುತ್ತದೆ ನಿನ್ನ ಮನೆಯ ಭಾಗ್ಯರತ್ನಳೆಂದು ಮಗು ಅಶೋಕಾ ಮೂರ್ತಿಗೆ ಬೆಲೆ ಬರಬೇಕಾದರೆ ಶಿಲ್ಪಿಯನ್ನೈಪುಣ್ಯದಿಂದಲ್ಲವೇ ಆದಕ್ಕಾಗಿ ನಿನ್ನ ಬಾಳದೇಗುಲವನ್ನು ರಚಿಸುವ ಶಿಲ್ಪಿನೀನಾಗು ಯಲ್ಲವೂ ನಿನ್ನನ್ನೆ ನೆಚ್ಚಿದೆ.

**ರಂಗಪ್ಪ**— ಖೈರವ್ವಾ ನೀವರ ಹೇಳ್ರಿ ಅಕ್ಕೀಕಾಳು ಬಿದ್ದಾವು ಬಿದ್ದಾವಯಂಥಾ ಹೆಣ್ಣು ನನಗ ಗಂಟಕಟ್ಟಿದ್ಯೋ ಅಂತಾ ವಂದ ಸವನ ನನ್ನಗೋಳ

ಹೊಯ್ಯಿತಾನ ಸಾಕಾಗಿ ಹೋಗ್ಯೈತಿರ್ರಿಯವ್ವಾ

( ಸಂಗಪ್ಪನು ಫಲಹಾರ ಚಹಾ ತಂದಿರುವನು )

**ಈಶ್ವರಪ್ಪಾ**— ಇರಲಿ ರಂಗಪ್ಪಾ ಸಮಾಧಾನ ತೆಗೆದುಕೊಳ್ಳಬೇಕು ಯಲ್ಲರೂ ಹಾಗೇ ಕುಳಿತಿಹರು ಮೊದಲು ಫಲಹಾರ ಮಾಡಿರಿ.

( ರಂಗಪ್ಪನು ಮೈಸೂರಪಾಕ ಹಿಡಿದುಕೊಂಡು )

**ರಂಗಪ್ಪಾ**— ಯವ್ವಾ ಈ ಕರದಂಟು ಮನ್ಯಾಗ ಮಾಡಿರೋ ಯೇನ ರಾಚಯ್ಯಾನ ಖಾನಾವಳ್ಯಾಗ ತರಿಸಿರೊ

**ಗೌರಾ**— ರಂಗಪ್ಪಾ ಖಾನಾವಳಿಯಲ್ಲಿ ಸಿಗುತ್ತದೆ ಯೇನು ಕರದಂಟು ಇದು ಕರದಂಟಲ್ಲಾ ಮೈಸೂರಪಾಕು ರಂಗಪ್ಪಾ.

**ರಂಗಪ್ಪಾ**— ಹೀಂಗೇನ್ರಿಯವ್ವಾ ನನಗೇನ ಗೊತ್ತಾರಿ ಇದೆಲ್ಲಾ ಮೈಸೂರಾಗ ತಂದದ್ವ ಆದ್ರ ನಮ್ಮೂರ ಕಳಕಪ್ಪನಾಂಗ ಆಗಿಲ್ಲ ಬಿತ್ರಿ ಅರ್ದಾ ಕಡ್ಲಿ ಹಿಟ್ಟು ಅರ್ದಾ ಜ್ವಾಳದ ಹಿಟ್ಟು ಕೂಡ್ಸಿ ಮಾಡಿವರ ಹಲ್ಲ ಇಲ್ಲದವರಿಗೆ ಯಂತಾ ಗಾಂವರಿ ತಿನ್ನಾಕ ಹ್ಯಾಗಾದರು ನಮ್ಮ ಹಳ್ಳಿ ಸುಖಾ ಪ್ಯಾಟ್ಯಾಗ ಹ್ಯಾಂಗ ಬಂತೀರಿ.

**ಅಶೋಕ**— ಅಪ್ಪಾ ಸಾಕುಮಾಡು ನಿನ್ನ ಹಳ್ಳಿಯ ಪುರಾಣ ಯಾವಾಗಲೂ ನನ್ನ ಹಳ್ಳಿ ನನ್ನ ಹೊಲಾ ನನ್ನ ಮನೆ ಅದು ಹಾಗೆ ಇದು ಹೀಗೆ ಅಂತಾ ಬಡಬಡಿಸುವಿ ಸಾಕುಮಾಡು ನಿನ್ನ ಕವಿನಾ ಅದೊಂದು ಮಳ್ಳ ಹೆಂಡತಿ ನೀನೊಬ್ಬ ಬೆಪ್ಪ ತಂದೆ ವಳ್ಳೇ ಜತೆಯಾದಿರಿ ನಿನ್ನ ಸಲುವಾಗಿ ನನಗೆ ಹುಚ್ಚು ಹಿಡಿದಿದೆ ಹುಚ್ಚು.

**ರಂಗಪ್ಪಾ**— ಹುಚ್ಚು ಹಿಡಿದೇನ ಮಾಡೀತಪಾ ಮಗನ ವಿದ್ಯಾಕ ಇದ್ದ ಹೊಲಾ ಮಾರಿ ಗೂಡಿನಾಗ ಗುಬ್ಬಿಕುಂತಾಂಗ ಕುಂತೀನಿ ಹುಚ್ಚುಯಾಕ ಹುಚ್ಚಿನ ಅಪ್ಪ ಹಿಡಿತೈತಿ.

**ರಘು**— (ವಳಗಿಂದ ಪ್ರವೇಶಿಸಿ) ಇದೇನು ಯಲ್ಲರೂ ಸುಮ್ಮನೇ ಕುಳತಿರುವಿರಲ್ಲಾ ಮೊದಲು ಚಹಾ ಕುಡಿಯಿರಿ ಚಂದ್ರಶೇಖರಾ ಹು ತೆಗೆದುಕೋ ಚಹಾ

**ಚಂದ್ರು**— ಯಜಮಾನರೇ ಯಲ್ಲರಿಗೂ ನಿಮ್ಮ ಸೊಸೆಯನ್ನು ನೋಡಬೇಕೆಂಬ ಆಶೆಯಾಗಿದೆಯಲ್ಲಾ ತಾವು ಕ ...........................

**ಈಶ್ವರಪ್ಪಾ**— ಚಂದ್ರಶೇಖರಾ ಇದಾವ ದೊಡ್ಡ ವಿಷಯ ನನ್ನ ಸೊಸಿಯಂದರೆ ನಿಮ್ಮ ತಂಗಿ ಇದ್ದಂತೆ ಸದ್ಯ ಕರಿಸುವೆ ಗೌರಾ ಗೌರಾ ಸುಶೀಲಾ ಮತ್ತು ಮೀರಾ ಇವರೀರ್ವರನ್ನು ಕರೆತಾ ಹಾ.

(ಗೌರಮ್ಮನು ಸುಶೀಲಾ ಮೀರಾ ಇಬ್ಬರನ್ನು ಕರೆದುಕೊಂಡು ಬರುವಳು)

**ಗೌರಾ**– ಮೀರಾದೇವಿಯಲ್ಲ ಅಂಣ-ತಮ್ಮಂದಿರಿಗೂ ನಮುಸ್ಕರಿಸಮ್ಮಾ

**ಮೀರಾ**— ನಮುಸ್ತೆ.

**ರಂಗಪ್ಪಾ**— ಯೇನ ಅಂತಾರತ್ರಿ ಅವ್ವಾರು

**ಚಂದ್ರು**— ಇದು ಕಲಿತವರ ನಮುಸ್ಕಾರ ಪದ್ಧತಿ

**ಶೆಟ್ಟರು**— ಇಶ್ವರಪ್ಪನವರೇ ಇವರು ಎಲ್ಲಿಯು ವರೆಗೆ ಕಲಿತಿರುವರು

**ಈಶ್ವರಪ್ಪಾ**— ಇಂಟರ ವರೆಗೆ ಕಲಿತಿದ್ದಾಳೆ.

**ಶೆಟ್ಟರು**— ಸಂತೋಷ ನಿಮ್ಮ ರಘುವಿನ ಭಾಗ್ಯಕ್ಕೆ ಕೊರತೆಯೇ ಇಲ್ಲಾ ಮತ್ತೆ ಸಂಗೀತ ಅಭ್ಯಾಸ ಮಾಡಿರುವರೇ

**ಚಂದ್ರು**— ಸಂಗೀತದಲ್ಲಿ ವಳ್ಳೆ ಪ್ರವಿಣರಿದ್ದಾರೆ

**ಶೆಟ್ಟರು**— ಮೀರಾ ವಂದು ಪದ್ಯವನ್ನಾದರೂ ಅನ್ನಮ್ಮಾ

**ಗೌರಾ**— ಹೇಳು ಹೇಳಮ್ಮಾ ದೇವರ ಮೇಲಿನ ವಂದು ಪದವನ್ನು ಹೇಳನ್ಮಾ

**ಮೀರಾ**— ನಾನು ಅವನ್ನೆಲ್ಲಾರ ಕಲತಿಲ್ಲವಲ್ಲಾ

**ಈಶ್ವರಪ್ಪಾ**— ನಿನಗೆ ಬಂದದ್ದಾರೂ ವಂದು ಹೇಳು ನಾಚಬೇಡಾ

**ಮೀರಾ**— ಪದಾ ಪದಾ

ನವಭಾವಾ ಸಾರಿಭವುರೂಪಾ ನಟಿಸಿನಾ ।
ನಟ ನಟನೆ ಭಾವದಿ ॥ ಪ ॥
ನಾನೇ ಜವದಿ ನಾಸಾಧಿಸುವೆ ।
ತೋರಿ ತೋರಿ ಸ್ತ್ರಿ ಕುಮತಿ ಭಾವದಿ ।
ಸರಸದಿ ಮೋಹಿವೆ ನೀರೆವಿ ಸದನಾ ॥

**ಶೆಟ್ಟರು**— ಬಹಳ ಚನ್ನಾಗಿ ಅನ್ನುತ್ತಾರೆ ನಿಮ್ಮ ಸೊಸೆ ಬಹಳ ವಿದ್ಯಾವಂತಳಿರುತ್ತಾಳೆ.

**ರಂಗಪ್ಪಾ—** ಇಷ್ಟೆಲ್ಲಾ ಆತ್ರಿಯವ್ವಾ ನಿಮಗ ಅಡಿಗೀ ಮಾಡಾಕ ಬರ ತಯಿತೇನ್ರಿ.

**ಮೀರಾ—** ಇಲ್ಲದ ವಿಷಯ ಕೇಳಬಾರದು ನೀವು ಯೇತಕ್ಕೆ ಬಂದಿರು ವಿರೋ ಅದನ್ನಷ್ಟೇ ಮಾಡಿಕೊಂಡು ಹೋಗಿರಿ ತಿಂಡಿಯನ್ನು ತಿನ್ನಲಿಕ್ಕೆ ಬಂದು ಇನ್ನೊಂದರ ವಿಚಾರ ಮಾಡಬಾರದು

**ಅಶೋಕ—** ಅಪ್ಪಾ ತಂಣಗೆ ಕುಳಿತುಕೋ ..... ನಿನಗೇತಕ್ಕೆ ಬೇಕು

**ಈಶ್ವರಪ್ಪಾ—** ಮೀರಾದೇವಿ ಅವರು ಹಿರಿಯರು ಹಾಗೆ ಕೇಳುವದೇ ಇಷ್ಟಕ್ಕೆ ನಿನಗೆ ಕೋಪ ಬರಬೇಕೇನಮ್ಮಾ

**ಗೌರಾ—** ಹಾಗೆಲ್ಲಾ ಬಂದವರಿಗೆ ಅನ್ನಬಾರದಮ್ಮಾ

**ಮೀರಾ—** ಸಾಕು ಸುಮ್ಮನಿರ್ರಿ ಇಲ್ಲದ ಪ್ರಶ್ನೆ ಕೇಳಲು ನೀವೇನು ನನ್ನನ್ನು ಕೊಂಡು ತಂದಿರುವಿರೇನು ಛೀ ಇಲ್ಲಿ ಯಲ್ಲವೂ ಬುದ್ಧಿ ಇಲ್ಲದ ಪಶುಗಳೇ ಕೂಡಿವೇ

( ವಳಗೆ ಹೋಗುವಳು )

**ಚಂದ್ರು—** ನೋಡು ರಘು ವಿದ್ಯಾವಂತರಿಗೆ ಇವೆಲ್ಲಾ ಸರಿಬಾರವು

**ರಘು—** ಇಂಥ ಅಧಿಕ ಪ್ರಸಂಗವನ್ನು ಕೂಡಿಸಿದ ನಮ್ಮ ತಂದೆಗಂತೂ ಬುದ್ಧಿಯೇ ಇಲ್ಲಾ.

**ಶೆಟ್ಟೆರು—** ಸಾವುಕಾರ ನಾವಿನ್ನು ಹೋಗಿಬರುತ್ತವೆ ನಮಸ್ಕಾರ.

**ಈಶ್ವರಪ್ಪಾ—** ಹೋಗಿಬನ್ನಿರಿ ಯಲ್ಲರಿಗೂ ನಮಸ್ಕಾರ

( ಟಿ ಪಾರ್ಟಿಗೆ ಬಂದವರು ಯಲ್ಲರೂ ಹೋಗುವರು )

**ಅಶೋಕ—** ಅಪ್ಪಾಜಿ ನೀವು ಹೊಸದಾಗಿ ಕಟ್ಟಿಸಿ ಕೊಟ್ಟಿರುವ ಮಹ ಲಿನಲ್ಲಿ ಯಲ್ಲ ವ್ಯವಸ್ತೆ ಮಾಡಿಸಿದ್ದೇನೆ ನಾವು ಸಹಾ ಇಂದೇ ಅಲ್ಲಿಗೆ ಹೋಗ ಬೇಕು ಅಂತಾ.........

**ಈಶ್ವರಪ್ಪಾ—** ಯಾರು ಬೇಡನ್ನುವರು ನಿಮ್ಮ ಸಲುವಾಗಿಯೇ ಕಟ್ಟಿ ಸಿದ್ದಿರುತ್ತದೆ ಆ ಮಹಲ ಗೌರಾ ಅಶೋಕನು ತನ್ನ ಸತಿಯನ್ನು ಕರೆದುಕೊಂಡು ಹೋಗುವನಂತೆ ಸುಸೀಲಾದೇವಿಗೆ ಹೂ ಮುಡಿಸಿ ಬೀಳ್‌ಕೊಡುವಸಿಪ್ಪತೆ ಮಾಡು

( ಸುಶೀಲ ವಳಿಗೆ ಹೂ ಮುಡಿಸುವರು )

**ಗೌರಾ—** ಪದಾ ಪದಾ

**ಗೌರಾ**— ಇದೋ ಅಮ್ಮಾ ನಮ್ಮ ಕಾಣಿಕೆ ( ಪಿತಾಂಬರ ಕೊಟ್ಟು) ಅಶೋಕನ ಮನೆಯ ಕೀರ್ತಿ ಮುತ್ತಾಗಿ ಯಲ್ಲರಿಗೂ ವುತ್ತಮಳಾಗಿ ನಿನ್ನ ಮನೆಯ ಹೆಸರು ಬೆಳಗಿಸಮ್ಮಾ.

**ರಂಗಪ್ಪಾ**— ನೋಡು ಸುಶೀಲವ್ವಾ ನಿನ್ನ ಗಂಡಗ ವಿದ್ಯಾ-ಬುದ್ಧಿ ಕಲಿಸಿ ವಕೀಲನ್ನ ಮಾಡ್ಯಾರ ದಿನ ವಂದಕ್ಕೂ ಅವರನ್ನು ನೆನಿಸಮ್ಮಾ

**ಅಶೋಕ**— ಅಪ್ಪಾಜಿ ನಾವು ಹೋಗಿ ಬರುತ್ತವೆ ನಡೆ ಅಪ್ಪಾ

(ಸುಶೀಲಾ ಅಶೋಕಾ ಯಲ್ಲರಿಗೂ ನಮಸ್ಕರಿಸಿ ಹೋಗುವರು)

**ಚಂದ್ರು**— ನಡೆ ರಘು ನಮ್ಮ ಬಂಗಲೆಯ ವರೆಗೆ ಹೋಗಿ ಬರುವಾ

( ಚಂದ್ರು ರಘು ಹೋಗುವರು )

( ಇಶ್ವರಪ್ಪನು ಚಿಂತಿ ಮಾಡುತ್ತ ಕುಳಿತನು )

**ಗೌರಾ**— ಏಳಿರಿ ಯೇಕೆ ಮತ್ತಾವ ಚಿಂತೆಯೂಯಿತು ನಿಮಗೆ

**ಈಶ್ವರಪ್ಪಾ**— ಗೌರಾ ವುತ್ತಮನಾರಿಯಂದು ಮನೆಗೆ ಕರೆತಂದ ಸೊಸೆಯಲ್ಲಿ ಅದೋ ಅವಳ ಮುಖ ಕಳೆಯೇ ಮಾರಿಯ ಲಕ್ಷಣ ಕಾಣುತ್ತದೆ ಇದು ವರೆಗೆ ಶಾಂತಿಯಿಂದ ನೆಲಸಿದ ನನ್ನ ಮನೆಯಲ್ಲಿ ಇನ್ನು ಅಶ್ಯಾಂತತೆಯ ಬಿರುಗಾಳಿ ಬೀಸುವದೋ ಯೇನೋ ಯಂದು ಭಯಾ

**ಗೌರಾ**— ಯಜಮಾನರೇ ಈಗ ಆದದ್ದಾದರೂ ಯೇನಾಗಿದೆ ಇಷ್ಟಕ್ಕೆ ಯೇನಾದರೊಂದು ಸಂಶಯ ತಿಳಿದುಕೊಳ್ಳದದೇ ಇಂದಿಲ್ಲ ನಾಳೆಯಾದರೂ ಬುದ್ಧಿ ಬಂದೇಬರುತ್ತದೆ.

**ಈಶ್ವರಪ್ಪಾ**— ಕಲಿತ ಬುದ್ಧಿ ಹೆಚ್ಚಾದುದರಿಂದಲೇ ಅವಿನಾಶದ ಬುದ್ಧಿ ಅಡವಾಗಿದೆ ಅವಳಲ್ಲ ಈದಿನದ ಲಕ್ಷಣಗಳೇ ಅಶುಭವಾಗಿ ಕಾಣುತ್ತವೆ ಇಂದಿನ ಬೆಳಗು ಭಾವದಲ್ಲಿ ವುಪ್ಪು ಬೆರಿಸಿ ಚಹಾ ಮಾಡಿದ ರೀತಿಯೇ ನನ್ನನ್ನು ಸಂಶಯದ ತೆರೆ ಬಂದು ಮುಚ್ಚಿದೆ

**ಗೌರಾ**— ವಲೆಯ ಮುಂದಿಟ್ಟ ಬಿಳೀ ವುಪ್ಪನ್ನೆ ಸಕ್ಕರೆ ಮಾಡಿ ಹಾಕಿದಳಂತೆ ಇದರಲ್ಲೇನಿದೆ ತಪ್ಪು

**ಈಶ್ವರಪ್ಪಾ**— ತಪ್ಪಾಗದಿದ್ದರೂ ಗೌರಾ ಸಕ್ಕರೆಯು ಹೊನಲಾಗಿ ಸಾಗಿದ ನಮ್ಮ ಜೀವನದ ಬಾಳು ಹಾಲಾಹಲವಾಗಬಾರದೆಂದೇ ನನ್ನ ಆಶೆ ಆದರೂ ನಮ್ಮ ಬರಹದಲ್ಲಿದ್ದಂತೆ ಕಾಲಕ್ಕನು ಗುಣವಾಗಿ ನಡಿಯಲೇಬೇಕಲ್ಲಾ

**ಗೌರಾ—** ಸದ್ಯ ಇಂಥಾ ವಿಪರೀತ ಕಲ್ಪನೆಗಳನ್ನು ತಂದು ಕೊಳ್ಳಬೇಡಿರಿ ಯಲ್ಲವೂ ಆ ದೇವ ನಿಶ್ಚೆ

**ಇಶ್ವರಪ್ಪಾ—** ನಿಜಾ ಗೌರಾ ಸಮಯಕ್ಕನುಸಾರವಾಗಿ ಬರುವದೆಲ್ಲವೂ ಆ ಶಿವನ ಪ್ರಸಾದ ಎಂದೆ ಅನುಗ್ರಹಿಸೋಣ

**ಗೌರಾ—** ಮೀರಾ ಮೀರಾ

**ಮೀರಾ—** (ವಳಗಿನಿಂದ ಬಂದು) ವಮ್ಮೆ ಕೂಗಿದರೆ ಸಾಲದೇ ನಿಮಗೆ ನನಗೆ ಕಿವಿಗಳು ಸ್ವಚ್ಚ ಕೇಳುತ್ತವೆ.

**ಗೌರಾ—** ನಿಮ್ಮ ಮಾವನವರು ಸ್ನಾನಕ್ಕೆ ಬರುವರಮ್ಮಾ ನೀರು ಕಾಯಿದಿವೆಯೋ

**ಮೀರಾ—** ನಾನು ವಲಿಯ ಸನೀಹಕ್ಕೆ ಹೋಗಿಲ್ಲವಲ್ಲಾ

**ಗೌರಾ—** ಹಾಗಾದರೆ ನೋಡಿಕೊಂಡು ಬಾರಮ್ಮಾ ಬಿಸಿ ಆಗದಿದ್ದರೆ ಬಿಸಿ ಮಾಡು

**ಮೀರಾ ...** (ಸಿಟ್ಟಿನಿಂದಾ) ಅತ್ತಿಯವರೇ ಚನ್ನಾಗಿ ಇದೊಂದು ಸಲಾ ನಿಮಗೆ ಹೇಳುತ್ತೇನೆ ಜ್ಞಾಪಕದಲ್ಲಿ ಇಟ್ಟು ಕೊಳ್ಳಿರಿ ನನಗೆ ಯಾವದೇ ತೆರನಾದ ಆಜ್ಞಯನ್ನಾಗಲೀ ಅಥವಾ ಮನೆಯ ಕೆಲಸವನ್ನಾಗಲೀ ಹೇಳಕೂಡದು ವಿಚಾರಮೂಡಿ-ನೋಡಿದರೆ ನಾನೇ ನಿಮಗೆಲ್ಲಾ ಆಜ್ಞ ಮಾಡಬೇಕು ತಿಳಿಯತೆ

**ಇಶ್ವರಪ್ಪಾ—** ಯೇನು ನಮಗೆ ಆಜ್ಞ ಮಾಡುವಷ್ಟು ಶಕ್ತಿ ಬಂದಿತೇ ನಿನ್ನಲ್ಲಿ ನೀನು ಯಾರ ಸೊಸೆ ಇದನ್ನು ಚನ್ನಾಗಿ ಅರಿತುಕೋ

**ಮೀರಾ—** ಯಾರ ಸೊಸೆಯಾದರೇನು ನನ್ನ ತಂದೆ ನೀವು ಕೇಳಿದಷ್ಟು ಹಣಾ ಕೊಟ್ಟು ಈ ಮನಿಯ ಸಾಮಿತ್ವವನ್ನೇ ನನಗೆ ಕೊಡಿಸಿದ್ದಾನೆ ಇದಲ್ಲದೆ ಹತ್ತು ಸಾವಿರ ವರವಕ್ಷಣೆಯನ್ನು ತೆಗೆದುಕೊಂಡು ನಿಮ್ಮ ಮಗನನ್ನು ಸಹಾ ನನಗೆ ಮಾರಿರುವಿರಿ ಅಂದ ಮೇಲೆ ನಾನು ಹೆಳಿದಂತೆ ಕೇಳುವದೇ ನಿಮ್ಮೆಲ್ಲರ ಕರ್ತವ್ಯ

ಜೋಕೆ ಹಾಂ (ವಳಗೆ ಹೋಗುವಳು)

**ಇಶ್ವರಪ್ಪಾ—** ನೋಡಿದಿಯಾ ಗೌರಾ ನಿನ್ನ ಸೊಸೆಯ ರೀತಿಯನ್ನು ಅಹೇ ದೇವಾ ಪರಮೇಶ್ವರಾ ನೀನು ಕುಣಿಸಿದಂತೆ ಕುಣಿಯುವವರು ನಾವು

ಗೌರಾ ಇನ್ನ ಮೇಲೆ ನನ್ನ ಮನೆಯು ಬಾಳರಾಗ ಅವತಾಳಕ್ಕೆ ನಡೆಯುವದೋ ನಡಿಯಲಿ ಯಲ್ಲವೂ ಶಿವ ನಿಶ್ಚೆ

**ಗೌರಾ**— ಏಳಿರಿ ಯಾವ ವಿಚಾರವ ಯಳತಕ್ಕೂ ಸಿಗಬೇಡ್ರಿ ನಾನೇ ಸ್ನಾನಕ್ಕೆ ಅಣಮಾಡುವೆ

( ಇಬ್ಬರು ವಳಗೆ ಹೋಗುವರು )

## ೯ ನೇ ಪ್ರವೇಶ

— ರಸ್ತಾ —

( ಚಂದ್ರು ರಘು ಮಾತನಾಡುತ್ತ ಬರುವರು )

**ಚಂದ್ರು**— ಮಿ. ರಘು ಮದುವೆಯಾಗಿ ಮಡದಿ ಮನೆಗೆ ಬಂದ ನಂತರ ಉತ್ಸಾಹದಿಂದ ನಿನ್ನ ಜೀವನ ಕಳೆಯುವದನ್ನು ಬಿಟ್ಟು ಮುಖ ಬಾಡಿಸಿಕೊಂಡು ಮುದುಕರಂತೆ ವರ್ತಿಸುವಿಯಲ್ಲಾ ಇದು ನನಗೆ ಸಲ್ಲದು

**ರಘು**— ಯೇನು ಮಾಡಲಿ ಚಂದ್ರು ಮಾನ ಹೋಗುತ್ತಿರುವ ಸಮಯದಲ್ಲಿ ಮನಸ್ಸಿನಲ್ಲಿ ಉತ್ಸಾಹ ಯಲ್ಲಿಂದ ಬರಬೇಕು ಮಿತ್ರಾ ಸತಿಯೊಡನೆ ಪ್ರೇಮದಿಂದ ಕಾಲ ಕಳೆಯುವ ಮಾತಂತೂ ಸ್ವಪ್ನವಾಗಿದೆ ತಂದೆ-ತಾಯಿ ನನ್ನ ಸತಿಯರಲ್ಲಿ ಬಿನ್ನಾಬ್ರಿಪ್ರಾಯದ ವಿಷಮ ಹೊಗೆಯು ಪಸರಿಸಿ ನನ್ನ ಜೀವನವನ್ನೆ ಹಾಳುಮಾಡಿ ಬಿಟ್ಟದೆ ಮನೆಯಲ್ಲಿ ಯಾರ ಪಕ್ಷವಹಿಸಬೇಕೋ ನನಗೆ ತಿಳಿಯದಾಗಿದೆ ಯಷ್ಟು ಕಲಿತವನಿದ್ದರೂ ನನ್ನ ಬುದ್ಧಿ ಕತ್ತಲೆಯ ಕಲ್ಪನೆಯಲ್ಲಿ ಮುಳಗಿದೆ ಮನೆಯಲ್ಲಿ ಯಾರ ಪಕ್ಷವಹಿಸಬೇಕೋ ತಿಳಿಯದಾಗಿದೆ ತಂದೆ-ತಾಯಿಗಳಂತೆ ಹೋದರೆ ನನ್ನ ಹೆಂಡತಿಯ ಸುಖವಿಲ್ಲಾ ಕಲಿತವಳೆಂದು ಹೆಂಡತಿಯ ಮಾತಿನಂತೆ ನಡೆದರೆ ಯನ್ನ ಮಾತಾಪಿತ್ರರು ಸುಖದಿಂದ ಜೀವಿಸುವ ಬಗೆಯಿಲ್ಲಾ ಕಾರಣ ಇದಕ್ಕೇನು ಪ್ರಯತ್ನ ಮಾಡಬೇಕೆಂಬುದೇ ಗೋಚರವಾಗದು.

**ಚಂದ್ರು**— ಮಿಷ್ಟರ ರಘು ಕಾಲೇಜ ಸ್ಟುಡಂಟನಾದ ನಿನಗೆ ಬುದ್ಧಿಯೇ ಇಲ್ಲಾ ಇದೋ ನೋಡು ಯೌವನದ ಮಧುರಸ ಸವೆದು ಮುಪ್ಪಾಗಿರುವ ನಿನ್ನ ಮುದಿ ತಂದೆ-ತಾಯಿಗಳು ಮಕ್ಕಳ ಪ್ರೇಮ ದಾಂಪತ್ಯ ರಸ ನಿಮಿಷದಲ್ಲಿ ಅವರೆ ವಿಷಹುಳವಿದ್ದಂತೆ ಅವರದೇನು ಕಾಣಬೇಕಾದ ಯಲ್ಲ ಸುಖಗಳನ್ನು ಕಂಡಿದ್ದಾರೆ

ಆನರೆ ಇನ್ನು ಬಳಿಕ ಸತಿಪತಿಯರು ಗ್ರೇಮಸಾಗರದಲ್ಲಿ ತೇಲುವವರು ನೀವು ಸುರಲೋಕದ ರಂಭೆಯಂತಿರುವ ಸತಿಯನ್ನು ಪಡದು ಅನುರಾಗವನ್ನು ಪಡೆಯದೆ ನಿತ್ಯ ಈ ಚಿಂತನೆಯಲ್ಲಿಯೇ ಸುಖಮಯವನ್ನು ವ್ಯರ್ಥ ಗಳಿದರೆ ನೀನೆಂದಿಗೂ ಆನಂದದ ಸನ್ನಿವೇಶ ಕಾಣಲಾರೆ ನೋಡು ವಿಚಾರಿಸು.................ತಿಳಿದವನಿರುತ್ತಿ ನಿನ್ನ ಯಾವತ್ತು ವಿಷಯಗಳಲ್ಲಿ ನಾನು ಸುಮಭಾಗಿಯಾಗುವ ನನ್ನ ವಿಚಾರಗ್ಕ ನಂಬು ಮಿತ್ರಾ

**ರಘು**— ನಿಜ ಈ ಸಮಸ್ಯಯನ್ನು ಹೇಗೆ ಯದಿರಿಸಬೇಕೋ ತಿಳಿಯದಾಗಿದೆ ಚಂದ್ರು.

**ಚಂದ್ರು**— (ನಗುತ್ತ) ಇದೋ ರಘು ವಿಚಾರಿಸಿದರೆ ದಾರಿ ಇದ್ದೆ ಇದೆ ನೋಡು ರಘು ಯಷ್ಟೇ ಆಗಲಿ ನಿನ್ನ ಸತಿ ವಿದ್ಯಾವಂತಳು ಅಲ್ಲದೆ ಆಧುನಿಕ ರೀತಿಯನ್ನು ಅನುಸರಿಸುವವಳು ಆದರೆ ನಿನ್ನ ಮಾತಾಪಿತ್ರರ ಹಳೆಯ ಕಾಲದ ಹುರುಳಿಲ್ಲದ ತತ್ವಗಳಲ್ಲಿ ತಲೆಕೆಡಿಸಿಕೊಂಡು ಅವಳ ಇಚ್ಛೆಗೆ ಯದುರಾದಲ್ಲಿ ಪಾಪ ನಿನ್ನನೇ ನೆಚ್ಚಿ ಬಂದ ಆಸಾಧ್ವಿ ಮೀರಾ ದೇವಿ ಯಾವ ಭಾವಿ ಪಾಲಾಗಬೇಕು ಇದೆಲ್ಲವೂ ನಿನ್ನ ಆತ್ಮಕ್ಕೆ ಅಪರಾಧ ವೆನಿಸದಿದ್ದರೂ ಅವಳ ಅತ್ಮಕ್ಕೆ ಅಪರಾಧವೆನಿಸುವದು ಇನ್ನೂ ನೂರು ಸಲಾ ವಿಚಾರಿಸಿ ದಾರಿಗೆ ಬಾ

**ರಘು**— ಇನ್ನು ವಿಚಾರವೇತಕ್ಕೆ ನೀನಂದಂತೆ ನನ್ನನ್ನೇ ನಂಬಿ ಬಂದ ನನ್ನ ಮಡದಿಯ ಮನಾ ಕಲಂಗಸಲಾರೆ ಅವಳ ಆತ್ಮ ಜ್ಯೋತಿಯ ಬೆಳಕೇ ನನ್ನ ಮುಂದಿನ ಹೆದ್ದಾರಿಯಂದು ತಿಳಿದು ಅವಳ ಇಚ್ಛೆಗೆ ಯದುರಾಗುವ ಆ ಮುದಿ ಪಿಶಾಚಿಗಳನ್ನೇ ಬದೆಗಿರಿಸುವದೇ ಉತ್ತಮ.

**ಚಂದ್ರು**— (ನಸ ನಗುತ್ತ) ಹಾಂ ಹೀಗೆ ದಾರಿಗೆ ಬಾರೋ ನವದಂಪತಿಗಳಾಗಿ ಸಾಗಿದ ನಿಮ್ಮ ಬಾಳು ಸಗ್ಗವಾಗಬೇಕಾದರೆ ಇಗ ಹೇಳಿದಂತೆ ನಿಮ್ಮ ತಂದೆ-ತಾಯಿಗಳ ಅಧಿಕಾರ ಕುಗ್ಗಲೇಬೇಕು ತಿಳಿಯಿತೆ ನಡೆ ಮಿತ್ರಾ ಶೋಹಕ್ಕೆ ಹೋಗುವಾ

( ಹೋಗುವರು ಅದೇ ರಸ್ತಾ )

( ರಾಮೂ ನಿಂಗಿ ಪ್ರವೇಶ )

**ರಾಮೂ**— ನಿಂಗಿ ಇಕಾ ನನಗಂತೂ ತಲೀಕೆಟ್ಟಿತು ಇಗ ನಿಮ್ಮ ಹಿರಿಯ

ನಮ್ಮ ಮ್ಯಾಲಂತೂ ಪಕ್ಕಾ ಸಂಶಯ ಕಟ್ಟಾಕ ಹತ್ಯಾನ ಮುಂದ ಅವಂಗ ಗೊತ್ತಾ ದರ ಹ್ಯಾಂಗಂತ ?

**ನಿಂಗಿ—** ಯೇ ರಾವೂ ಆ ಮೂಳಾ ಯೇನ ತಿಳಿಕೊಂಡರೂ ನಮ್ಮ ಸ್ನೇನು ಮಾಡತಾನ ಅವಂಗ ಹೆದರುವಾಂಗ ಇದ್ದರ ನಿನ್ನ ಕೈಯಲ್ಲಿ ಓಡಿತಿದ್ದೆ

**ರಾವೂ—** ವಟ್ಟ ನಾ ಹೇಳುವಂದ್ರು ಇಲ್ಲಿಂದಾ ಕಾಲಕೀಳಬೇಕು ಇಲ್ಲಾಂದ್ರ ಪೊತ್ತು ನೋಡಿ ನಮ್ಮ ನಡಾನಾ ಮುರದಾನ

**ನಿಂಗಿ—** ಹಂಗರ ಸುಮ್ಮನ ಹೀಂಗ ಮಾಡುನ ತಡಿ ನನಗೊಂದು ವಿಚಾರ ಬಂದೈತಲ್ಲಾ ಹೇಳ್ಯಾ ಇಗ ನಾಕ ಮನಿ ಹಳ್ಳ್ಯಾಗ ಸಹಿತ ಮುರು ಮುರು ನಾಟಕ ಕಂಪನಿ ಆಗ್ಯಾವ ನಮ್ಮಂಥವರು ಸೋಗ ಮಾಡಿತೀನಿ ಅಂದ್ರ ನಾಟಕದ ಕಂಪನಿ ಮಾಲಕರು ನಮ್ಮ ಮ್ಯಾಗ ಬಿದ್ದ ಸಾಯಿತಾರ ಅದಕ ಇಲ್ಲೆ ಯಲ್ಲೆರ ವಂದು ಕಂಪನ್ಯಾಗ ಸೇರಿ ಬಿಡೂನು

**ರಾವೂ—** ಅಲ್ಲೇನು ಮಾಡಾಕ ಕರಕೊಂತಾರ ನಮ್ಮನ !

**ನಿಂಗಿ—** ಅಯ್ಯ ಇಷ್ಟತನ ಹೇಳಿದೆನಲ್ಲಾ ಸೋಗು ಮಾಡತಿನಿ ನೀನು ಪಡೇದ ಹಗ್ಗಾ ಜಗ್ಗಂತ

**ರಾವೂ—** ಅಂತೂ ನೀನು ಸೋಗ ಮಾಡಿ ಆಯ್ಯಾರಾ ಹೊಡಕೊ ಬೇಕಂತ ಮಾಡಿದೇನ ಅಂತೂ ವಳೀಕತಿ ಹುಡಿಕಿದೇಳ

**ನಿಂಗಿ—** ನೋಡೇರ ನೋಡು ರಾವೂ ನನ್ನ ಸ್ಯಾಣೇತನಾ ವರ್ಷವ ಪ್ಪತ್ಯನ್ಯಾಗಾ ಮಾಲಕನ ವಂದ ಮಾಡಿಕೊಂಡು ನಾವು ದೊಡ್ಡ ಶಿರಿವಂತ ರಾದ್ರಾತಿಲ್ಲೋ

**ರಾವೂ—** ನಿಂಗೀ ಯೇನ ಆಗಲಿ ಈ ರಾಮನ ಕೊನೆಗೆ ಯಲ್ಲಿಗೆ ಮುಟ್ಟಸ್ತಿಯೋ ಮುಟ್ಟಿಸು ನಾನನಕಾ ಕೂಳುನೀರು ಬಿಟ್ಟು ಹಿಂದ ತಿರಗ ತೀನಿ ನೋಡು ನಾಟಕ ಕಂಪನಿ ಕೇಂದ್ರು ಬಲು ಗೊಂದ್ಲಂತ ನೀ ಸಿತಾನ ಸೋಗು ಮಾಡಿದ್ಯಾಗ ರಾವಣ ಪಾರ್ಟ ಮಾಡವ ನಿನ್ನ ಮ್ಯಾಲೆ ಕಂಣಿಟ್ಟಾ ಅಂದ್ರು ಮತ್ತ ನಮುಗ ವನವಾಸಕ್ಕೆ ಹೋಗು ಹೊತ್ತು ಬಂದಿಂತು ಅಂತ

**ನಿಂಗಿ—** ಯಾಕ ಇಲ್ಲದ ಎಚಾರ ಮಾಡತೀದಿ ಹೊತ್ತು ನೋಡ ನನ ಗಂಡಗ ಗತ್ತ ಹಚ್ಚಿ ಹೋಗುನು ತಿಳಿತಿಲ್ಲೋ

**ರಾವೂ—** ಹೂಂ ಸಾಗಲಿ ನಿನ್ನ ಗಾಡಿ

ಜಯಾ ನಮಃ ಪಾರ್ವತಿ ಪತಿ ಹರಹರ ಮಹಾದೇವ

## ೧೦ ನೇ ಪ್ರವೇಶ

ವಕೀಲರ ಮನೆ ಟೇಬಲ ಕುರ್ಚಿ ಬುಕ್ಸು ವಂದು ಮಗ್ಗಲಿಗೆ ಮಂಟಪದಲ್ಲಿ ದೇವಿಯ ಮೂರ್ತಿ ಸುಶೀಲಾ ಪೂಜಿಸುತ್ತಿರುವಳು

**ಪದಾ**

ರಾಗ    ತ್ರಿತಾಲ    ಮಿಶ್ರ ಕಂಬಾನತಿ

ತಾಯಿ ನೀಕಾಯೇ ಶ್ರೀ ಗೌರಿ ಶುಭಕರಿ ತಾ ||
ಧೀನೋದ್ಧಾರಿ ದಯವ ತೋರಿ || ಪಲ್ಲ ||
ಪತಿಗೆ ಸುಮತಿಯ ನೀಡೇ ಜನನೀ ||
ಸತಿಯ ಮಾನವ ಕಾಯೇ ಕರುಣೀ ||
ಸತಿ–ಪತಿ ಸೌಖ್ಯದೋಳ್ ||
ಇರಿಸೇ ಭವಾನಿ ತಾಯೇ ||

**ಸುಶಿಲಾ**— ಅದೇ ತಾಯೇ ಲೋಕಮಾತೆ ನಿನ್ನಂಬಿಡದೆ ಭಜಿಸುತ್ತಲಿಹೆನು ಹೇ ಭಕ್ತವಿದಾತೆ ಈ ಜಗದಲಿ ಎಲ್ಲ ಲೀಲೆಯು ನಿನ್ನದಲ್ಲವೇ ಯನ ಪತಿಗೆ ಸುಮಾರ್ಗವ ತೋರಿ ಕರುಣದಿಂದ ಕಾಪಾಡು ತಾಯಿ (ನಮಸ್ಕರಿಸುವಳು)

(ಹೊರಗಿನಿಂದ ಓರ್ವ ಹೆಂಣು ಮಗಳು ದು:ಖಸುತ್ತ ಬಂದ)

**ಇರವ್ವಾ**— ಅವ್ವಾ ಆವರೇ ಅಪ್ಪಾ ಅವರು ಮನೆಯಲ್ಲಿ ಇರುವರೇನು ತಾಯಿ

**ಸುಶಿಲಾ**— ಬಾ ತಾಯಿ ಇತ್ತ ಬಾರಮ್ಮಾ ಯಾರಮ್ಮಾ ನೀವು ನಿಮಗೆ ಯಾರಬೇಕಮ್ಮಾ ಹೇಳು ತಾಯಿ ಹೇಳು

**ಇರವ್ವಾ**— ತಾಯಿ ವಕೀಲರು ಇಲ್ಲೇನ್ರಿ ಯವ್ವಾ

**ಸುಶೀಲಾ**— ಇಲ್ಲ ತಾಯಿ ಹೊರಗೆ ಹೋಗಿದ್ದಾರೆ ಬರುವ ಹೊತ್ತಾಗಿದೆ ಬಾ ಅಮ್ಮಾ ಕುಳಿತುಕೋ

**ಇರವ್ವಾ**— ಯವ್ವಾ ವಕೀಲರಿಗೆ ತಾವು ಯೇನಾಗ ಬೇಕವ್ಮಾ

**ಸುಶೀಲಾ**— ಅವರ ಹೆಂಡತಿಯಮ್ಮಾ (ನಾಚುವಳು)

**ಇರವ್ವಾ**— ಯವ್ವಾ ಯಂಥಾ ಧರ್ಮವಂತ ಅದಿಯವ್ವಾ ಬಾಳ ಚಲೋ ಆತು ಯವ್ವಾ ನೀವರ ಹೇಳ್ರಿ ಯವ್ವಾ ಮನಿ ಉದ್ದ ಮಗಾ ಇದ್ದು ವಪ್ಪತ್ತಿನ ಅನ್ನಕ ಗತಿಯಿಲ್ಲಾ ಹ್ಯಾಂಗ ಮಾಡಬೇಕರಿಯವ್ವಾ

**ಸುಶೀಲಾ**— ಅಂದ್ರೆ ನಿನ್ನ ಮಗನು ದುಡಿಯುವದಿಲ್ಲವೇ

**ಇರವ್ವಾ**— ಯವ್ವಾ ಅವಾ ದುಡಿದದ್ದು ಯಾರಿಗೆ ಬೇಕರಿ ನಾ ದುಡದದ್ದ ನನಗ ಇಲ್ರಿ, ನಾಲ್ಕು ಕೂರಿಗೆ ಹೊಲಾ ಇದ್ದು ಮನಿತುಂಬ ಕಾಳ ಇದ್ದು ನನ್ನ ಪಾಲಿಗೆ ಯೇನೂ ಇಲ್ಲದಾಂಗ ಆಗ್ಯೈತಿರ್ರಿ

( ವಕೀಲರು ಬಂದ ನಂತರ ಸುಶೀಲಾ ಪಾದಕ್ಕೆ ವಂದಿಸಿ ಪ್ರಸಾದಕೊಡುವಳು )

**ಇರವ್ವಾ**— (ಘಾಬರಿಯಿಂದಾ) ಯಪ್ಪಾ ನಮಸ್ಕಾರ್ರಿ

**ಅಶೋಕ**— ನಮಸ್ಕಾರವಾ ಬಾ ಅವ್ವಾ ಕುಳಿತುಕೊ ನೀವು ಯಾವ ವೂರಿನವರು ನಿಮ್ಮ ಹೆಸರೇನು ನಮಲ್ಲಿ ಯೇನು ಕೆಲಸವಿತ್ತು

**ಇರವ್ವಾ**— ಅಪ್ಪಾ ಅವರೇ ನನ್ನ ಹೆಸರು ಇರವ್ವಾ ಅಂತಾರ್ರಿ ನಮ್ಮ ಊರು ಜೆಣಕಲ್ರಿ ಯಪ್ಪಾ ನಾಕ ಕೂರಿಗಿ ಹೊಲಾ ಅಯಿತ್ರಿ ಮಗಾ ನೋಡಿದ್ರ ಹೆಣತಿ ಮಾತಿ ಕೇಳಿ ನನಗ ಹೊರಗ ಹೋಗಿ ದುಡಕೊಂಡು ತಿನ್ನು ನಮ್ಮಲ್ಲಿ ಇರಬ್ಯಾಡಾ ಅಂತಾನರಿ ಅದ ಮನ್ಯಾಗ ವುಪವಾಸ ಬಿದ್ದುಕಾಲ ಕಳಿಯೂನ ಅಂದ್ರು ಮಲಗಾಕ ಜಗಾಕೊಡವಲ್ರಿ ಹೀಂಗಾದ್ರು ನಾಯಲ್ಲಿ ಹೋಗಬೇಕ್ರಿ ನೀವು ದೊಡ್ಡ ವಕೀಲಪ್ಪಾರು ಅದಿರಿ ನನಮಗ್ಗ ಬುದ್ಧಿ ಹೇಳಿ ಓಟು ಹೊಲಾ ಬಂಕದಾಗ ವಂದು ಕ್ವಾಣಿ ಕೊಡಸರ್ರಿ ಅಂದ್ರ ನಿಮಗ ಪುಣ್ಯ ಬರತ್ತ.

**ಅಶೋಕ**— ಸರಿ ಸರಿ ನಿನ್ನ ಮಗನಿಗೆ ಹೇಳಿ ನಿನ್ನ ವುಪ ಜೀವನಕ್ಕೆ ಸ್ವಲ್ಪ ಹೊಲಾ ಕೊಡಸಿದರೆ ಆಯಿತಲ್ಲಾ ಇಷ್ಟೇ ನಿನ್ನ ಅಭಿಪ್ರಾಯ

**ಇರವ್ವಾ**— ಹೆಚ್ಚಿಂದು ಯಾರಿಗೆ ಬೇಕಾಗ್ಯೈತ್ರಿ ಯಪ್ಪಾ ಅಷ್ಟ ಮಾಡ್ರಿ

**ಅಶೋಕ**— ಹಾಗಾದರೆ ವೂರಿಗೆ ಹೋಗಿ ನಿನ್ನ ಮಗನನ್ನು ಕರೆದುಕೊಂಡು ಬಾ ನಾನೆಲ್ಲ ತರದಿಂದ ಹೇಳಿ ನಿನಗಷ್ಟು ಹೊಲಾ ಮತ್ತು ಇರಲಿಕ್ಕೆ ಖೋಲಿ ಸಹಿತ ಕೊಡಿಸುವೆ ತಿಳಿಯಿತೇ ತಾಯಿ

**ಇರವ್ವಾ**— ಯಪ್ಪಾ ಹಾಂಗ ಬಾ ಈ ಕರಾರ ಮಾಡೂದ ಬ್ಯಾಡ್ರಿ ಮತ್ತು ಹೆಣತಿ ಮಾತ ಕೇಳಿ ತಿರಗಿ ಬೀಳತಾನ್ರಿ ವಂದ ಅದಕ ಇದಕಾನ ಮಾಡ್ಸಿಕೊಡ್ರಿ.

**ಅಶೋಕ**— ಹಾಗೇ ಆಗಲಿ, ಇನ್ನು ವಕೀಲಿ ಫೀ ನ್ಯಾಯದಂತೆ ಕಾಗದ ಮಾಡಿಸಲು ಕೋರ್ಟಿನ ಫೀ ಯಲ್ಲಾ ದುಡ್ಡು ತಂದಿರುವೆ ಏನಮ್ಮಾ ?

**ಇರವ್ವ**— ಯಪ್ಪಾ ವುಪಾಸ ಸಾಯು ಮುಂದ ದುಡ್ಡ ಯಲ್ಲಿಂದಾ ತರಲ್ರಿ.

**ಅಶೋಕ**— ದುಡ್ಡು ತರದಿದ್ದರೆ ಇಷ್ಟೆಲ್ಲಾ ಕೆಲ್ಸಾ ಹೇಗಾಗ ಬೇಕಮ್ಮಾ

**ಇರವ್ವ**— ಯಪ್ಪಾ ನೀವ ಯೇನರ ಮಾಡಿ ನನಗ ಯರಡ ಕೂರಗಿ ಹೊಲಾ ಕೊಡಸರಿ. ಮುಂದ ಬೇಕಾದ್ರ ಅದನ್ನ ಯಾರಿಗೆರ ಲಾವಣಿಹಾಕಿ ನಿಮ್ಮ ಯಲ್ಲಾ ಪೀಫೀ ತಂದುಕೊಡತೀನ್ರಿ.

**ಅಶೋಕ**— ಪಿಫೀ ಅಲ್ಲವ್ವಾ ಫೀ ಅನ್ನಬೇಕು. ಫೀ ಉನ್ರಿ ಹೇಳಲಿಕ್ಕೆ ಕೋರ್ಟು ಅಂದ್ರೆ ಅದೇನು ಕಿರಾಣಿ ಚಹಾದ ಅಂಗಡಿ ಅಲ್ಲಾ ನ್ಯಾಯಸ್ಥಾನ. ಇರವ್ವ ನನ್ನ ಫೀ ಕೊಡದಿದ್ದರೆ ಅಷ್ಟೇ ಹೋಯಿತು ಕೋರ್ಟಿನ ಫೀಮಾತ್ರ ಕೊಡಲೇ ಬೇಕಾಗುತ್ತದೆ.

**ಇರವ್ವ**— ಯಪ್ಪಾ ನೀವ ಯೇನರ ಮಾಡಿ ಕೊಡ್ರಿ ಹಿಂದಿನಿಂದ ನಿಮ್ಮ ಮನಿ ಚಾಕರಿಮಾಡಿ ಮುಟ್ಟಸ್ತಿನ್ರಿ

**ಅಶೋಕ**— ಅದೆಲ್ಲಾ ನಮ್ಮಿಂದಾ ಸಾಧ್ಯವಿಲ್ಲಾ ವೂರಿಗೆ ಹೋಗಿ ಹಣಾ ತರಲೇಬೇಕು ಅದಾಗದಿದ್ದರೆ ಬೇರೇ ಯಾರ ಕಡೆಗಾದರೂ ಹೋಗು ಸುಮ್ಮನೇ ನಮಗೇಕೆ ತೊಂದರೆ ಕೊಡುವಿ

**ಇರವ್ವ**— ಯಪ್ಪಾ ನಿಮ್ಮ ಕಾಲು ಬೀಳುತ್ತೇನೆ ಮೂರುದಿನದಿಂದಲೂ ವುಟಾ ಸಹಿತ ಮಾಡಿಲ್ರಿ ವುಟಾನರ ಮಾಡಸ್ರಿ ವೂರಿಗೆ ಹೋಗಿ ಯಾರನರ ಕೇಳಿ ದುಡ್ಡ ತರತೀನ್ರಿ

**ಅಶೋಕ**— ವೂಟಾ ಬಟ್ಟೆ ಕೊಟ್ಟು ಪಕ್ಷಗಾರರನ್ನು ಸಲುಹಲು ಇದೇನು ಅನ್ನಛತ್ರವಲ್ಲಾ ಹೋಗು ಹೋಗವ್ವಾ

**ಸುಶೀಲಾ**— ಪತಿದೇವಾ, ಪಾಪ ಬಡವಿಗೆ ಮೂರುದಿನ ಅನ್ನವಿಲ್ಲವಂತೆ ಬಡತನದೊಡಲಿನ ಆರ್ಥಧ್ವನಿ ಅನ್ನಕ್ಕಾಗಿ ಅಂಗಲಾಚಿ ಬೇಡಿಕೊಳ್ಳ ಬೇಕಾಗುತ್ತದೆ. ನೀವು ಹೀಗೆ ನುಡಿದರೆ ಉತ್ಪತ್ತಿಯಿಂದ ನಮ್ಮ ಮನೆತನಕ್ಕೆ ಕಲಂಕ ಬರುವದೇನೋ ನಿಜ ಆದರೆ ಮೂರುದಿನಗಳಿಂದಲೂ ಹೊಟ್ಟೆಗೆ ಹಿಟ್ಟಿಲ್ಲದೆ

ನಿರ್ಬಲಳಾಗಿ ನಿಮ್ಮ ಪಾದ ಹಿಡಿದು ಬೇಡುತಿಹಳು ಇದನ್ನು ಲಕ್ಷಿಸಲಾರಿರಿ, ಆಗಲಿ ನಾನೇ ವೂಟಮಾಡಿಸುವೆ

**ಅಶೋಕ**— ಸುಸೀಲಾ; ಎಂಥ ಧರ್ಮಕಟ್ಟಳೆಯಮಾತು ನನ್ನೆದುರಿನಲ್ಲಿ ಬಿಚ್ಚಬೇಡಾ. ಬೇಕಾದರೆ ನಿನ್ನ ತವರೂರಿನಿಂದ ಹಣತರಿಸಿ ಅನ್ನಛತ್ರ ಇಡಿಸು

**ಸುಶೀಲಾ**— ಸ್ವಾಮಿ. ಹಸಿದು ಅನ್ನ ಅನ್ನವೆಂದು ಬಳಲುತ್ತ ಬಂದವಳ ಮುಂದೆ ಹೀಗೆಲ್ಲಾ ಮಾತನಾಡಬೇಡ್ರಿ. ಬೇಕಾದರೆ ನನ್ನದಿನದ ಪಾಲಿನ ಅನ್ನವನ್ನೇ ಇವಳಿಗೆ ವೂಟ ಮಾಡಿಸುವೆ. ಬಾರಮ್ಮಾ ವೂಟಮಾಡಿಕೊಂಡು ಹೋಗುವಿಯಂತೆ

(ಸುಸೀಲಾ ಇರವ್ವನನ್ನು ವಳಗೆ ಕರೆದುಕೊಂಡು ಹೋಗುವಳು)

**ಅಶೋಕ**— ಹಾ! ಮುಂದೇನು ನಾನು ನನ್ನವೃತ್ತಿಯಂತೆ ಈ ಪಕ್ಷಗಾರಳಿಗೆ ಹೇಳಿದರೆ ಇದರರ್ಥ ಈ ಸುಸೀಲೆಯು ಮಾಡಿಕೊಳ್ಳದೆ ತನ್ನ ಹಟವನ್ನೆ ಸಾಧಿಸಿದಳು ಈಗಿನ ಜಗತ್ತಿನಲ್ಲಿ ಇವಳೇ ಧರ್ಮ ದೇವತೆಯಾಗಿರುವಳೋ ಯೇನು ಆಗಲಾಗಲಿ

(ವಕೀಲನು ಕಾಯ್ದೆಬುಕ್ಕು ನೋಡುತ್ತ ಕೂಡ್ರುವನು)

**ನಿಂಗಪ್ಪ**— (ಪ್ರವೇಶಿಸಿ) ಶರಣರೀ ಯಪ್ಪಾ ವಕೀಲ್ರು ಶರಣರೀ

**ಅಶೋಕ**— ನಮಸ್ಕಾರ ಬಾ ಕುಳಿತುಕೋ ತಾವು ಯಾವ ವೂರಿನವರು

**ನಿಂಗಪ್ಪ**— ಯುಪ್ಪಾ ನಾನು ನಿಮ್ಮ ವೂರು ಮುಗ್ಗಲದ ಹಳ್ಳಿಯವನರಿ ನಿಮ್ಮ ಅಪ್ಪಾ ಅವರಿಗೂ ನಮ್ಮ ಆಪ್ಪಾವರಿಗೂ ಬಲು ಗುರ್ತರಿ ಆದರೆ ನಮ್ಮ ಅಪ್ಪಾ ಅವರು ನಿಮ್ಮ ಹತ್ತಕ ಕಳಿಸ್ಯಾರ್ರಿ ಬೇಕಾರ ಇದನ್ನ ನಿಮ್ಮ ಅಪ್ಪಾ ಅವರಿಗೆ ಬೇಳ್ರಿ ನನಗ ನಿಂಗಪ್ಪಾ ಅಂತ ಅಂತಾರ್ರಿ

**ಅಶೋಕ**— ನಿಂಗಪ್ಪಾ ಅದೆಲ್ಲಾ ಸರಿ ನೀನು ನಮ್ಮ ಹತ್ತಕ ಬರಬೇಕಾದರೆ ಅಂಥ ಕೆಲಸವೇನಿದೆ ಮೊದಲು ಹೇಳು

**ನಿಂಗಪ್ಪ**— ಯುದಕಂದ್ರು ಐತಲ್ರಿ ಈಗ ಮೂರವರ್ಷ ಅತ್ರಿ

**ಅಶೋಕ**— ಯೇನಾಗಿ ನಿಂಗಪ್ಪ

**ನಿಂಗಪ್ಪ**— ಮದುವೆ ಆಗಿ ಆಗೇತಿ ಆಗೇತಿ ತಪ್ಪಿಲ್ರಿ

**ಅಶೋಕ**— ಯೇನು ತಪ್ಪಿಲ್ಲಾ ಅದನ್ನೇ ಹೇಳು

**ನಿಂಗಪ್ಪ**— ನ್ಯಾಯರಿ

**ಅಶೋಕ**— ನ್ಯಾಯಾ ಯಾವ ನ್ಯಾಯಾ ಯಂಥ ನ್ಯಾಯಾ

**ನಿಂಗಪ್ಪ**— ನಮ್ಮ ಅಪ್ಪಗ ನನ್ನ ಹೇಣತಿ ಅಪ್ಪರ್‍ರಿ ಇದು ಸಹಿತ ನಿಮ್ಮ ಅಪ್ಪಾರಿಗೂ ಗೊತ್ತ ಅಯಿತ್ರಿ. ಬರೇ ಅನ್ಯಾಯರ್‍ರಿ ಈದರಾಗ ಯಾರದು ನ್ಯಾಯಾ ಯಾರದು ಅನ್ಯಾಯಾ ಗೊತ್ತ ಆಗೋಲ್ಲದ್ರಿ ಅದಕ ಇದನ್ನಷ್ಟ ನಿಕಾಲಿ ಮಾಡಿ ನನ್ನ ಬಾಳೇಕ ಹಚ್ರಿ ಯಪ್ಪಾ

**ಅಶೋಕ**— ಬರೇ ವಡಪ ಆಯಿತಲ್ಲಾ ಯಾವ ನ್ಯಾಯ ಅಂತ

**ನಿಂಗಪ್ಪ**— ಆದನ್ನ ಹೇಳಿದೇನಲ್ರಿ ಇಟತಾನಾ ಮದುವ್ಯಾಗ ನ್ಯಾಯ ಸುರು ಆಗೇತ್ರಿ ನಮ್ಮ ಅಪ್ಪಾ ಲಗ್ನದಾಗ ಲಗ್ನಶಿರಿ ಕೊಟ್ಟಿಲ್ಲಂತರ್‍ರಿ ಅದನ ಕೊಡುತನಾ ನನ್ನ ಮಗಳ ಕಳಸೂದಿಲ್ಲಾ ಅಂತಾ ನನ್ನ ಹೇಣ್ತಿ ಅಪ್ಪಾ ಅಂತಾನ್ರಿ. ಅದನ್ಯಾಕ ಕೊಟ್ಟೇನು ಕೊಡದ ನಿನ್ನ ಮಗಳ್ನ ಕರಕೊಂಡು ಹೋಗದಿದ್ರು ನಾನು ಗಂಡಸ ಅಲ್ಲಾ ಅಂತಾನ್ರಿ ಶಿರಿ ತರದ್ಹೆ ನನ್ನ ಮಗಳ್ನ ಕಳ ಸಿದ ನಾ ಗಂಡಸಲ್ಲಾ ಅಂತಾ ನಮ್ಮ ಮಾವಾ ಅಂತಾನ್ರಿ ಈ ಇಬ್ಬರ ನ್ಯಾಯ ದಾಗ ನಾ ಆ ಗಂಡಾಹೇಣತಿ ಗಪ್ಪನ ಮೂಲಿಹಿಡದೀವ್ರಿ ಅದಕ ನಾವು ಯಾಂಗ ಮಾಡಬೇಕ್ರಿ

**ಅಶೋಕ**— ನಿಂಗಪ್ಪಾ ಯಾವ ದೊಡ್ಡ ನ್ಯಾಯವೆಂದು ಹೇಳಲಿಕ್ಕೆ ಬಂದಿರುವಿ. ಕೇವಲ ವಂದು ಸೀರಿಯ ಸಲುವಾಗಿ ಅಲ್ಲವೇ ಕೊಡುವದನ್ನು ಕೊಟ್ಟು ಕರೆದುಕೊಂಡು ಬಂದರಾಯಿತು.

**ನಿಂಗಪ್ಪ**— ಅದನ್ನ ಕೊಡುವಂಗಿದ್ರು ಇಲ್ಲಿ ತನಕ ಯಾಕ ಬರಲಿ ಬಿಡಗಡಿ ಮಾಡಾಕ ಕಳಿಸ್ಯಾನ್ರಿ ನಿಮ್ಮ ಹತ್ರ.

**ಅಶೋಕ**— ಹತ್ತು ರೂಪಾಯಿ ಶೀರೆಗೆ ಬಿಡುಗಡೆಮಾಡಿ ಮುಂದೆ ಮತ್ತೊಂದು ಮದುವೆಗೆ ಹತ್ತುಸಾವಿರ ಖರ್ಚುಮಾಡಬೇಕಲ್ಲವೆ. ನಿಂಗಪ್ಪ ಪೂರಿಗೆ ಹೋಗಿ ನಿಮ್ಮ ತಂದೆಯವರನ್ನು ಕಳಿಸು ನಾನೆಲ್ಲವನ್ನು ತಿಳಿಸಿ ಸರಿ ಮಾಡಿಸುತ್ತೇನೆ

**ನಿಂಗಪ್ಪ**— ಯಪ್ಪಾ ಹೋಗಲಿ ಅಂತಾನ್ರಿ ಇನ್ನ ಹತ್ತುಸಾವಿರ ಹೋಗಲಿ ಅಂತಾನ್ರಿ ಹತ್ತರೂಪಾಯಿ ಶೀರಿ ತರುದಿಲ್ಲಾ ಯೇನ ಆಗುದು ಆಗಲಿ ಅಂತಾನ್ರಿ.

**ಅಶೋಕ**— ಆಗಲಿ ನಿಮ್ಮಂತೆ ಆಗಲಿ ಬಿಡುಗಡೆ ಮಾಡಬೇಕಾದರೆ ನೋಟಿಸ ಕೊಡಬೇಕಾಗುವದು ನೋಟಿಸ ಕೊಡಲು ಹಣ ತಂದಿರುವಿಯಾ

**ನಿಂಗಪ್ಪ**— ಇಲ್ರಿ ತಂದಿಲ್ರಿ ಯೇನ ಮಾಡೂದು ಮಾಡ್ರಿ ಹಿಂದೆಗಡಾ ಕೊಡತಾನ್ರಿ

**ಅಶೋಕ**— ಸದ್ಯ ಪೇಪರಿನಲ್ಲಿ ಕೊಡಲು ಹಣಬೇಕಲ್ಲಾ

**ನಿಂಗಪ್ಪ**— ಅದಕೂ ನೀವ ಕೊಡ್ರಿ ಬೇಕಂದ್ರ ಸಂತಿಮಾಡು ಐದು ರೂಪಾಯಿ ಅಪಾಪ್ರಿ ಕೊಡು ಅಂದ್ರ ಅವನ ಕೊಡತಿನ್ರಿ.

**ಅಶೋಕ**— ಐದುರೂಪಾಯಿ ಇನ್ನರೆ ಸಂತೆಮಾಡಿಕೊಂಡು ವೂರಿಗೆ ಹೋಗು ಹತ್ತುರೂಪಾಯಿಗೆ ಹತ್ತುಸಾವಿರ ಖರ್ಚುಮಾಡುವ ನಿಮ್ಮಂಥವ ರಿಂದಲೇ ವೂರಿಗೆ ಯರಡು ಕೋರ್ಟುಗಳಾದರೂ ಸಾಲದಾಗಿವೆ. ನಿಂಗಪ್ಪಾ ನಿಮ್ಮಂಥಾ ವುದ್ರಿ ಜನ ಹೆಚ್ಚಾದ್ದರಿಂದಲೇ ವಕೀಲಗಳೋರ್ಡು ಮಾಸಿ ಹೋಗ ಹತ್ತಿವೆ. ನಿಮ್ಮಂಥ ಪಕ್ಷಗಾರರು ಬರುವರೆಂದು ಸರಕಾರದವರು ನಮಗೇನು ಜಹಗೀರು ಹಾಕಿಕೊಟ್ಟಿರುವರೇ ಹೋಗು ಹೋಗು ನಿಂಗಪ್ಪಾ ವೂರಿಗೆ ಹೋಗು ಸುಮ್ಮನೇ ನಮ್ಮನ್ನು ದುಡಿಸಬೇಡಾ ವೂರಿಗೆ ಹೋಗು.

(ನಿಂಗಪ್ಪನು ಹೋಗುವನು)

**ಅಶೋಕ**— ಯಂದು ನಾನು ವಕೀಲನಾದೆನೋ ಅಂದೆನಿಂದ ಈ ಹಳ್ಳಿ ಜನರ ಗೋಳು ಕೇಳಿ ಕೇಳಿ ಸಾಕಾಗಿ ಹೋಗಿದೆ ಈ ವೃತ್ತಿಯೇ ಬೇಸರ ವಾಗಿದೆ ಯೇನು ಮಾಡಬೇಕೋ ತಿಳಿಯದಾಗಿದೆ

(ವಕೀಲನು ಮುಗ್ಧನಾಗಿ ಹಣೆಗೆ ಕೈ ಹಚ್ಚಿಕೊಂಡು ಕೂಡ್ರುವನು)

**ರಂಗಪ್ಪಾ**— (ಪ್ರವೇಶಿರಿ) ಅಶೋಕಾ ಏಕೆ ಸುಮ್ಮನೇ ಕುಂತಿರುವಿ ಕಚೇರಿಗೆ ಹೋಗಿಲ್ಲವೆ ಸುಶೀಲವ್ವಾ ಸುಖದಿಂದಾ ಇರುವಳೇ

**ಅಶೋಕ**— ಬಾ ಅಪ್ಪಾ ಕುಳಿತಿರುವೆ ತಂಗಿಯ ಮಗಳೆಂದು ತಂದು ನನ್ನ ಕೊರಳಗೆ ಕಟ್ಟಿದ ಆ ನಿನ್ನ ಸುಶೀಲೆಯು ನನ್ನ ಯಾವತ್ತು ಕಾರ್ಯದಲ್ಲಿ ಅಡತಡೆಯನ್ನುಂಟುಮಾಡಿ ಪಕ್ಷಗಾರರ ಮುಂದೆ ದಯಾಳುತ್ವವನ್ನು ಬೀರುತ್ತಾ

ಧರ್ಮವಂತಿಯಾಗಿ ಮೆರೆಯುತ್ತಿರುವಳು ಇಂಥವಳಿಂದ ನಮಗೆ ಸಿಗುವ ದುಡ್ಡು ಸಹಿತ ಸಿಗದೆ ಬರಿಗೈಯಿಂದಾ ಬಾಳಬೇಕಾಗಿದೆ ಈ ಬಾಳಿನಲ್ಲಿ

**ರಂಗಪ್ಪಾ**— ಅಶೋಕಪ್ಪಾ ಆ ತಾಯಿಯ ಬಗ್ಯ ಯೇನೂ ತಿಳಕೊ ಬೇಡಾ ನೀನೇ ಬುದ್ಧಿ ಹೇಳುತ್ತ ಹೋಗಪ್ಪಾ ಹಾಂಗೆಲ್ಲಾ ಮಾತಡಬ್ಯಾಡಾ ಮತ್ತ ಈ ತಿಂಗಳದಾಗ ದುಡ್ಡು ಕೊಡದಿದ್ದರ ನಮ್ಮ ಹೊಲಾ ಕೈ ಬಿಡತಾವು ಅದಕ ಹಾಂಗ ಮಾಡಬೇಕು ಸಾಲದ ಕಟಿಕಟಿ ಆಗ್ಯೆತಿ ದುಡ್ಡು ಕೇಳಾಕಂತನ ಬಂದೀನಿ ಕೊಡಪಾ

**ಅಶೋಕ**— ದುಡ್ಡಿದ್ದರಲ್ಲವೇ ನಿಮಗೆ ಕೊಡುವದು

**ರಂಗಪ್ಪ**— ಅಂದ್ರ ಬರು ದುಡ್ಡು ಯಲ್ಹೈತಿ ಮುಂಜಾಲಿಂದಾ ರಾತ್ರಿ ಮಲಗುವತನಕಾ ಪಕ್ಷಗಾರರು ಬರುದು ತಪ್ಪಿಲ್ಲಾ ಅವರಿಂದಾ ಬರು ದುಡ್ಡು ಯೇನಾತು

**ಅಶೋಕ**— ಕೇವಲ ಈ ಮನೆಗೆ ಜನಾ ಬರುವರೇ ವಿನಹ ಧನ ಬರ ಲಾರದು

**ರಂಗಪ್ಪ**— ಅಂದ್ರ ಜನಾ ಬಂದರ ಹಣ ಯಾಕ ಬಂದಲ್ಲಾ ಇದು ನನಗ ತಿಳಿಯಾಕಿಲ್ಲಾ ಶ್ಯಾಣೆ ಕುಂತು ಹೀಂಗ ಮಾತಾಡಿದರೆ ನಮ್ಮಂಥವರ ಗತಿಯೇನು ಅಂತಾ

**ಅಶೋಕ**— ಇದನ್ನು ಯಾರನ್ನಾದರೂ ನೀನೇ ಕೇಳಿಕೋ ಯ್ಯಾವ ಪರಿಷ್ಟ ಮುಹೂರ್ತದಲ್ಲಿ ಇವಳು ಬಂದು ನಮ್ಮ ಮನೆಯಲ್ಲಿ ಅಡಿ ಇಟ್ಟಳೋ ಅಂದಿನಿಂದ ನನ್ನ ವ್ಯವಸಾಯವೇ ನಿಂತು ಹೊಗಿದೆ.

**ರಂಗಪ್ಪ**— ಅಲಾ ನಿನ ದುಡ್ಡಿಗೆ ಬೆಂಕಿಹಾಕಾ ಸುಮ್ಮನೆ ಹೇಣತಿ ಮ್ಯಾಗ ಯಾಕ ಹಾಕಿಪಾ ಪಾಪ ಬಂಗಾರದಂಥಾ ಹೇಣ್ತಿ ನಿನ್ನ ಪಾಲಿಗೆ ಸಿಕ್ಕ್ಯಾಳ

**ಅಶೋಕ**— ಬೆಂಕೀಹಚ್ಚಿತು ನನ್ನ ನಸೀಬದ ಸುಖ ಸ್ವಪ್ನಕ್ಕೆ ಹೇಳಿ ದಷ್ಟು ಹಣಕೊಟ್ಟು ಇಡೀ ಆಸ್ತಿಯನ್ನೇ ನನ್ನ ಪಾಲಿಗೆ ಬಿಟ್ಟುಕೊಟ್ಟು ಕಲಿತ ಕನ್ಯೆಯನ್ನು ಧಾರಿಯರದು ಕೊಡುವ ಬೀಗರನ್ನು ಬಿಟ್ಟು ತಂಗಿಯ ಮಗಳೆಂದು ಹೇಳಿ ಕರುಳ ಬಂಧನಕ್ಕೆ ನನ್ನ ಬಾಳನ್ನೇ ಹಾಳು ಮಾಡಿದೆ

**ರಂಗಪ್ಪ—** ಪಾಡಾತು ಬಿಡು ನನ್ನ ಮಗಾಕಲ್ತು ಸಾವಕಾರ ಆಗ್ಲಿ ಅಂತಾ ಉದ್ದ ಹೊಲ ವತ್ತಿ ಹಾಕಿ ಮನೀಮಾರಿ ವಕೀಲನ್ನ ಮಾಡಿ ಬಂಗಾರಂಥ ಹೆಣ್ಣು ತಗದು ಮದುವೆ ಮಾಡಿದ್ದಕ್ಕೆ ನಿಮ್ಮಪ್ಪನ ಉಪಕಾರ ತೀರಿಸ್ತಿ

**ಅಶೋಕ—** ಯಾರು ಇಲ್ಲನ್ನುವವರು ಯಲ್ಲಪನ್ನೂ ಮಾಡಿವೆ ವತ್ತೀ ಹೊಲವನ್ನು ಬಿಡಿಸಿಕೊಂಡು ಸಾಯುವವರೆಗೆ ಸುಖದಿಂದ ಇರುವ ಭಾಗ್ಯ ತಂಮ ಕೊಡುತ್ತಿದ್ದೆ ಆದರೆ ಯೇನು ಮಾಡುವದದೆ ಇಂಥ ದರಿದ್ರ ಹೆಂಣನ್ನು ಗಂಟುಹಾಕಿ ನನ್ನ ಬಾಳೆ ಕಟ್ಟಡವನ್ನೇ ಸುಟ್ಟು ಬಿಟ್ಟೆ ನನ್ನ ಮನದ ಆಶಾ ನೌಕೆಯನ್ನೇ ಮುಳಗಿಸಿ ಬಿಟ್ಟೆ ನನ್ನ ಫಣಿಯಲ್ಲಿ ಆ ಬೊಮ್ಮನು ಇಂಥ ಕನ್ಯೆಯನ್ನೇ ಲಗ್ನವಾಗೆಂದು ಬರದಿದ್ದನೋ ಯೇನೋ ಇವಳ ಕಾಲ್ಗುಣವೇ ಚನ್ನಾಗಿಲ್ಲವಂತೆ ಹತ್ತಾರುಕಡೆ ಭವಿಷ್ಯವನ್ನು ಕೇಳಿದ್ದೇನೆ ಇವಳನ್ನು ಬಿಡುವವರೆಗೂ ಈ ನನ್ನ ಮನೆತನಕ್ಕೆ ದರಿದ್ರತನ ತಪ್ಪಿಲ್ಲಾ ತಿಳಿಯಿತೆ

**ರಂಗಪ್ಪ—** ಅಲ್ಲಪ್ಪಾ ವಕೀಲಪ್ಪಾ ನಾಲ್ಕ ಮಂದಿಗೆ ಬುದ್ಧಿ ಹೇಳವಾ ನೀನ ದಾರೀ ಬಿಟ್ರ ಮಾಡುದೇನ ಇಕಾ ನನಗೆ ಅಂದಂಗ ಆ ನನ್ನ ಸೊಸೆ ಸುಶೀಲವ್ವಗ ಯೇನರ ಅನ್ನಾಕ ಹೋಗಬೇಡಾ ಆ ತಾಯಿ ಬಹಳ ಸ್ಯಾಣೇಕಿ ಅದಾಳ ನಾನ ಬಂದಾಗೊಷ್ಮೆ ಹಿಂಗ ಹೇಳಿದರ ಸಾಲದವರು ಯಲ್ಲೆ ಕೇಳತಾರ ಹೊಲಾ ಹೋದರ ಹೋಗಲಿ ನಾನೂ ವೂರಿಗೆ ಹೋಗುವದಿಲ್ಲಾ ನಾಲ್ಕು ಜನರನ್ನು ಕೂಡಿಸಿ ಈ ಮಾತು ಅವರ ಮುಂದ ಇಡತೀನಿ ಯೇನ ಆಗುತ್ತ ಆಗಲಿ ಸುಸೀಲವ್ವಾ ಸುಸೀಲವ್ವಾ ( ವಳಗೆ ಹೋಗುವನು )

**ಅಶೋಕ—** ಹೋಗು ಹೋಗು ಬೇಕಾದಷ್ಟು ಜನರನ್ನು ಕೂಡಿಸಿಕೊ ನನ್ನಂಥಾ ವಕೀಲನಿಗೆ ಬುದ್ಧಿ ಹೇಳಲು ಅವರೆಷ್ಟರವರು ನನ್ನನ್ನೇನು ಹಳ್ಳಿಯ ಹುಂಬನೆಂದು ತಿಳಿದುಕೊಂಡಿರುವನು ಈ ನನ್ನ ಮುದಿ ತಂದೆಯು

ಮತ್ತೆ ತನ್ನ ಕಾಯದೆ ಬುಕ್ಕು ನೋಡುತ್ತ ಕೂಡ್ರುವನು

## ೧೧ನೇ ಪ್ರವೇಶ ರಸ್ತಾ

(ಸಂಗನು ವಿಚಾರಿಸುತ್ತ ಬರುವನು)

**ಸಂಗ—** ಇವಾ ಯಾವ ತಮ್ಮಾ ಮನಿಹೊಕ್ಕು ಯಲ್ಲಾ ಗುಮ್ಮಾಕ ಹತ್ತಿದನಪಾ ಅಂತೀನಿ. ಯಾವಾಗ ನೋಡಿದರೂ ಅಕ್ಕಾ ತಮ್ಮಾ ಅಂತಾ

ಚಕ್ಕ್ಯಾನ ಆಡತಿರತಾರಲ್ಲ ಇವರ ಪಕ್ಕಾ ಹಕೀಕತ್ತ ತಿಳಿಸಲ್ಲದು ಲೆಕ್ಕಹಾಕಿ ನೋಡಿದರ ರಾಮನ ಅಕ್ಕಾ ನಮಗ ದಕ್ಕುವಂಗ ಕಾಣುವಲ್ಲು ಸಿಕ್ಕಸಿಗಲಿ ಕೈಯಾಗ ದಿಕ್ಕತಿಳಿದಾಂಗ ಮಾಡಬೇಕಂತೀನಿ ಯೇನ ಮಾಡುದು ನನ್ನ ನೋಡಿದ ಕೂಡ್ಲೆ ಆಮಗಾ ನಿಂಗು ಅಕ್ಕಾ ನಿಂಗು ಅಕ್ಕಾ ಅಂತಾನ ಇಕಿ ನೋಡಿಯಾ ಬಾರ ತಮ್ಮಾ ನಿಮ್ಮಾವ ಬರು ಹೊತ್ತಾತು ವುಣ ಬಾ ಅಂತಾಳ. ಇದಕ ಹ್ಯಾಂಗಂತ (ನಿಂಗಿ ರಾಮಾ ಬರುವದನ್ನು ನೋಡಿ) ಅಲಲಲಲಲಲ ಯೇನ ಭರಜರಿ ಹೊಂಟಾವಪಾ ಬರಲಿ ಸನ್ಯಾಕರ ಬರಲಿ ಇವರ ವಳಗುಟ್ಟಿರ ತಿಳಿಲೀ ಅಂದ್ರ ತಲೀಮಟಾ ಯತ್ತಿ ಕುಟ್ಟಾಕರ ಬರತೈತಿ ಆಸನ್ಯಾಕ ಬಂದ್ರು ಇಲ್ಲೆ ಸ್ವಲ್ಪ ಮರೆಯಾಗಿ ನಿಂತನೋಡುನು

(ವಂದು ಬಾಜು ಮರೆಯಾಗುವನು)

(ನಿಂಗಿ ರಾಮಾ ನಗುತ್ತ ಬರುವರು)

**ರಾಮಾ—** ನಿಂಗೂ ಅಂತೂ ನಿನ್ನ ಕೈಯಾಗ ಹೌದನ್ನು ಗಂಡೂ ಇದ್ರೂ ಗೋಲಿಗುಂಡ ಮಾಡಿತಿ ಅಲ್ಲಾ ಅಲ್ಲ ಮತ್ತ್ರ ನಾಟಕ ಕಂಪಿನ್ಯಾಗ ಇರಾಕ ಮಾಲೀಕನಕಾ ವಪ್ಪಿದನ ಆದ್ರ ಆ ಕೆಂಪ್ಯಾನ ಮುಂದಿ ಮತ್ತು ಕಂಪನಿ ಮಾಲೀಕನ್ನ ನೋಡಿ ನಗ್ಯಾಕ ಹೆದರಕೀನ ಬರತ್ತ

**ನಿಂಗಿ—** ಹೆದರಕಿಯಾಕ ಬರತ್ತ ಅವರೇನ ಹುಲಿನೋ ಕರಿಡೊ ಯೆಂದರ ನಾಟಕ ಮುಂದಿ ಕಂಡಿದೋ ಇಲ್ಲೋ

**ರಾಮಾ—** ಕಂಡಿನೇಳ ನಾನೇನ ಅರೆದವಾ ಅಲ್ಲಾ ಮೊನ್ನೆ ಮೊನ್ನೆ ಬಂದಿತ್ತು ನಮ್ಮೂರಿಗೆ ವಂದು ದೊಡ್ಡ ಕಂಪನಿ ಅದರಾಗ ಹೆಣ್ಣಸೋಗ ಮಾಡ ವರೆಲ್ಲಾ ಹೆಣಮಕ್ಕಳ ಇದ್ರ ಅವರಿಗೂ ದಿನಾ ನಾಟಕಕ್ಕೂ ಬಹಳ ಅಂದರ ೭–೮ ರೂಪಾಯಿ ಆಕ್ಕಿತ್ತು ಮತ್ತ ನಮ್ಮ ವೂರು ಸಾವಕಾರು ಗೌಡ್ರು ದೊಡ ದೊಡ್ಡವರೆಲ್ಲಾ ಹಂಗಹೋಗಿ ಮುಂದಕುಂದರತಿದ್ದರು ಅಂಥಾ ದೊಡ್ಡವರಿಗೆಲ್ಲಾ ಪಿರಿಪಾಸ ಇರತ್ತಂತ ಅದೆಲ್ಲಾ ನಮಗೇನಗೊತ್ತ ನಿಂಗು ನಾನು ವಂದಿನಾ ನಾಟಕ ನೋಡಾಕ ಹಂಗ ಬಿಗದಿದ್ದೆ ನಾನರ ಯೇನಂತ ತಿಳಿದಿದಿ.

**ನಿಂಗಿ—** ಇಷ್ಟೆಲ್ಲಾ ಗುಡ್ಡ ಗುಡ್ಡದಂತಾ ಮಾತ ಹೇಳ್ತಿದಿ ಮತ್ತ ಇದಕ್ಯಾಕ ಹೆದರತಿದಿ

**ರಾಮಾ**— ನಾ ಯದುರ ಪೈಕಿ ಅಲ್ಲಾ ಯೇನ ಬೇಕಾದ್ದಾಗಲಿ ನಾಟಕದ ಕುಲದ ಮಂದಿ ತಂಬುದ ಕಠಿಣ ನೀನರ ಅಂದಾಕರ ಚಲಿವಿ ಅದೀದಿ ಕೆಟ್ಟ ಕಂಣು ಇದ್ರೂ ಅಂದ್ರ ನಮ್ಮ ಗದಿಗಿ ಕಟ್ಟ ಬಿಡತಾರ ಅದಕ ಹ್ಯಾಂಗ ಮಾಡುನು ಅಂತಾ

**ನಿಂಗಿ**— ಇಕಾ ರಾಮಾ ಈಗ ಹೆಣಮಕ್ಕಳಿಗೆ ನಾಟಕದ ಕಂಪಿನ್ಯಾಗ ಸಿಗುವಷ್ಟು ಸಂಬಳಾ ಇನ್ನ ಯಾವ ದಂದೆದಾಗೂ ಸಿಗುವದಿಲ್ಲಃ ಸುಮಾಕ ನನ್ನ ಮಾತು ಕೇಳು ವೂಟ ಅವರು ವುಟಗೋಳುದು ಅವರದು ತೊಡುದು ಅವರದು ಚಹಾ ಅವರವು ಇರುಕ್ವಾಣಿ ಆವರದು ಇಷ್ಟ ಆಗಿಂದ ನಮ್ಮ ಬರೂ ಪಗಾರ ಹಂಗಕೂಡ್ಸಿ ಇಟ್ಟ್ಬಿ ನಾವು ತುಸುದಿಂದಾಗ ಸಾವುಕಾರ್ರ ಆಗಿ ವಂದ ಕಂಪನಿ ಮಾಡೂನಂತ

**ರಾವಾ**— ನೀಯೇನ ಹೇಳದ್ರು ನಾಟಕದ ಕಂಪನಿ ನಲನ ಹತ್ತ್ರವಲ್ಲದು ವಟ್ಟ ನಿನ್ನ ಬೆನ್ನಹತ್ತ್ರೀನಿ ಹತ್ತ್ರೀನಿ ತೇಲಿಸರ ತೇಲಿಸು ಮುಳುಗಿಸರ ಮುಳಗೀಸು ಆತ

**ನಿಂಗಿ**— ಇಡಗಟ್ಟಯಾಗ ನೀನೂಂದು ಬಾ ನೋಡೀರ ನೋಡ ನನ್ನ ಶ್ಯಾಣೇತನ ಬಾಬಾ ಹೊತ್ತ ಆಗತ್ತ ಗಸಕ್ಕ ಉಂಡು ಹೊರಬೀಳಂತ ಹದ್ದ ಕಾಯ್ಕೊಂಡ ಕುಂತಾಂಗ ಕುಂತಿರತ್ತೈತಿ ಅದೊಂದು ಗಂಡು

(ಹೋಗ ಹತ್ತುವರು ಸಂಗನು ಬರುವನು)

**ಸಂಗ**— ಅಬಬಬಬ ಮತ್ತೇನು ಅಕ್ಕಾ ತಮ್ಮನ ನಾತಾ ನಾಟಕ ಕಂಪನಿತನಾ ಹೋತೀನ ನಿಂಗೂ ನೀನು ನಾಟಕದ ಕಂಪನಿ ಸೇರಿ ಹಚ್ಚಬೇಕಂದ್ರೇನು ಇಂಗ ಇನ್ಯಾಕ ಕಿನ್ನ ಹಂಗು

**ನಿಂಗಿ**— ಯೇ ಯೇ ಯತಲಾಗ ಮಾತಾಡತೀದಿ ನಾಟಕ ಕಂಪನಿ ಸೇರಾಕ ನನ್ನೇನ ದಾಸರಾಕಿ ಡಂಬರಾಕಿ ಮಾಡಿದೇನ ನೋಡಿ ಮಾತಾಡು ವಂದೀಟು ನಮ ತಮ್ಮ ದುಡಿಲಾರದ ಕುಂತತಿಂತಾನ ಅಂತ ಹಗಲಿ ಹನ್ನೆರಡು ತಾಸ ಹಂಗಸತಿದ್ದಿ ಅದಕ ಅವಂಗ ತಂಣಗ ನಾಟಕ ಕಂಪನ್ಯಾಗ ಇರಾಕ ಹೇಳಿ ಬಂದೆ ತಿಳಿತ

**ಸಂಗ**— ಹಿಂಗೇನ ನೀನ ಯಲ್ಲೆ ನಾಟಕದಾಗ ಸೇರಿ ರಾಣಿ ಪಾರಟಿಗೆ ನಿಂತಾಳೋ ಅಂತಾ ಮಾಡಿದ್ದೆ ಲೇ ಅಳಿಯಾ ನನ್ನ ಬಹದ್ದರ ಅಳಿಯಾ ನೀನ

ಲೇಕಂದ್ರ ಯಡ್ಡ ಹೊಸಾ ಅಂಗೀನು ಹೊಲಕೊಡತೀನಿ ನಿನ್ನ ಕರ್ಚಿಗೆ ನಾಕ ದುಡ್ಡ ಕೊಡತೀನಿ ಇವತ್ತ ನನಮನಿ ಬಿಡಪಾ

**ರಾಮೂ**— ಯೇ ಸಂಗಪ್ಪ ಮಾಮಾ ನಿನಗ ಇಷ್ಟ ಬ್ಯಾಸರ ಆದ್ರ ಈಗ ಹೋಗಂದ್ರ ಹೋಗಾಕ ತಯಾರ ಅದೀನಪಾ ಮಾವಾ

**ನಿಂಗಿ**— ಬಾಬಾರ ತವ್ಮ್ಯಾ ಅದಕೇನು ಗೊತ್ತು ಅದು ಹಂಗ ವದುರದ ಇದರ ಕೂಡ ಹೋದರ ನಮುಗ ಯ್ಯಾರೂ ಮಾತಾಡಸಾಕಿಲ್ಲಾ ನಮ್ಮ ನಮ್ಮ ಕಳ್ಳ ನಮುಗ ಗೊತ್ತು ಬಾ ಹೋಗುನು

**ಸಂಗ**— ನೋಡಿದಿರ್ಯಾಪಾ ಈ ಹೆಂಣಿನ ಧೈರ್ಯನ ಗಂಡನ ಹೆದರಕೀ ಸ್ವಲ್ಪರ ಇಕೀಗೆ ಆಯಿತ್ತೈಂದ್ರೇನ ಹುಂ ಹುಂ ಸಾಗಲಿ ಸಾಗಲಿ ಯಲ್ಲೀತನಾ ಸಾಗತೈತ್ಯೋ ಸಾಗಲಿ ಕಡಿಗೆ ಆಯಿತಲ್ಲಾ ಕೊಡ್ಲಿ ಪೂಜಿ ಮಾಡುದು ಕಚ್ಚಿ ಹಾಕುದು

ಸಂಗನು ಹೋಗುವನು ಅದೇ ರಸ್ತಾದಲ್ಲಿ ಚಂದ್ರು ಮೀರಾ ಪ್ರವೇಶಿಸುವರು

**ಚಂದ್ರು**— ಮೀರಾ ನಿನ್ನ ಮನದದುಗುಡವನ್ನು ಮರೆತು ಬಿಡು ಮನವಿದ್ದಲ್ಲಿ ಮಾರ್ಗ ವಿದ್ದೇಅದೆ ಕಪಟನಾಟಕದ ಅತನ್ನೇ ಹತ್ತದ ನನ್ನ ಕಾರಸ್ಥಾನದ ಪಂಜಿರದಲ್ಲಿ ನಿನ್ನ ಪತಿಗತಿ ತಪ್ಪಿ ಸಿಕ್ಕಿರುವಾಗ ಅವನಿಗೆ ನಮ್ಮ ಬಗ್ಯ ಯಾವ ಸಂಶಯುವೂ ಇಲ್ಲಾ ನೀನು ಆ ಗರ್ಭ ಶ್ರೀಮಂತರ ಮಗಳಾಗಿ ಅಧೈರ್ಯ ಪಡುವ ಕಾರಣವೇನೂ ಇಲ್ಲಾ ಸಮಯು ಸಾಧಿಸಿ ಪ್ರಥಮ ಆ ನಿಮ್ಮ ಅತ್ತೆ ಮಾವಂದಿರಾದ ಮುದಿ ಮಗಳನ್ನು ಇಲ್ಲವಾಗಿರಿಸಿ ನಾವು ಬಯಸಿರುವ ಹೊಸ ಸಂಸಾರ ಸುಗ್ಗಿಯಲಿ ಸಂತೋಸದಿ ಕಾಲಕಳಿಯುುವಾ ಯಂದು ಘಂಟಾ ಘೋಷವಾಗಿ ಹೇಳಬಲ್ಲೆ

**ಮೀರಾ**— ಚಂದ್ರು ನಾನು ಆ ಗರ್ಭಸ್ತ್ರೀಮಂತರ ಮಗಳೆಂದು ದುರಭಿಮಾನದಿಂದ ಮನೆಯವರನ್ನು ವಂಚಿಸಿಗೆಲೆದರೂ ಜನರಬಾಯಿ ಕಟ್ಟಿ ಬಾಳಲಾರೆವು ಪುಣ ಕಸುಬಕ್ಕೆ ಅನಂತವೇದನೆ ಸಹಿಸುವದು ನನಗಿಷ್ಟವಿಲ್ಲಾ ಅದೇಕೋ ನನಗೆ ಭಯುಬರುತ್ತಾದಲ್ಲಾ

**ಚಂದ್ರು**— ( ನಗುತ್ತಾ ) ಭಯಾ ಭಯುವಿದ್ದರೆ ಯೌವನಭಾಗ್ಯ ನಿನಗೆಲ್ಲ ಮೀರಾ ಹದಬಂದ ಕಾಲಕ್ಕೆ ಹುದಿಗಿಕೊಡ್ರುವದೇ ಹಿಂದುಳಿಯುುವ ಲಕ್ಷಣ ಮೀರಾ ಭಯವೆಂಬುವದು ಸಾಹಸಿಯ ಕೋಶದಲ್ಲಿಯೇ ಇಲ್ಲಾ ನೀನು

ಮಾತ್ರ ಧೈರ್ಯವಾಗಿರುರು ಈ ಕಾರ್ಯಕ್ಕೆ ಶೋಭೆ ತಂದು ನಿನ್ನ ಮಾನ ಕಾಯುವ ರಕ್ಷಣೆ ನನ್ನದು ನನ್ನ ಮೇಲೆ ಪ್ರೇಮ ನಂಬಿಗೆಯು ಮಾತ್ರ ನಿನ್ನದು ನಿನ್ನೆ ನಾನು ಹೇಳಿದಂತೆ ಈ ದಿನ ಆ ನಾಟಕವಾಗತಿ ಮನೆಯಲ್ಲಿ ನಾಟಕದ ಪ್ರಥಮ ಪ್ರವೇಶದಲ್ಲಿಯೇ ನಿನ್ನ ಬಾಳಿನ ಭವಿತವ್ಯವನ್ನು ಕಂಡು ಕೊಳ್ಳುವಿ ಬಾಹೀಗ ಕಿವಿಯಲ್ಲಿ ಹೇಳ್ರಿ ಹೀಗೆ ಧೈರ್ಯ ಮಾಡು ಯಲ್ಲದಕ್ಕೂ ನಾನ್ರು ಶಿದ್ಧನಿದ್ದೇನೆ

**ಮೀರಾ—** ನಾನು ಅಷ್ಟು ಮೆಚ್ಚುಗೆ ಆದವಳೆ ಆಯೋಗ್ಯ ನನ್ನಲ್ಲಿ ಇರುವದೇ

**ಚಂದ್ರು—** ಆ ಮಾತು ಬೇರೆ ಹೇಳಬೇಕೆ ಮೀರಾ

**ಮೀರಾ—** ಅಂಥ ಭಾಗ್ಯ ನನಗೆ ಇದ್ದುದಾದರೆ ನಾನೇ ಪುಣ್ಯ ವಂತಿ ಇನ್ನು ನಾನು ಪೂರ್ತಿ ನಿಮ್ಮವಳು ನಿಮ್ಮಯೋಚನೆಯೇ ನನ್ನ ಮನದ ಮಾರ್ಗ ಬನ್ನಿ ( ಕೈ ಹಿಡಿದು ನಗುವಳು )

**ಚಂದ್ರು—** ಇಸುದಿನ ನನಗಾಗಿ ಕಾದಿದೆ ಯಂದು ಕನಸಿನಲ್ಲಿಯೂ ಕಂಡಿದ್ದಿಲ್ಲಾ ಬಾನನ್ನ ಚಿನ್ನಾ ನಿನೇ ನನ್ನ ಸರ್ವಸ್ವ (ನಗುವನು)

ಮೀರಾನ ಪದಾ

ಬಾ ಬಾ ಯಂನ ಚಂದಿರ ಬಾ ಬಾ ನೀಸುನ್ನ ಸುಂದರ ಬಾ
ನಲಿ ನಲಿದಾಡುತ ಕೂಡುನು ಬಾ ಬಾ
ಮೋಹವ ಬೀರುತ ನೀ ಬಾರೈ ಪ್ರೇಮವತೋರುತ
ನೀ ಬಾರೈ ನಲಿ ನಲಿದಾಡುತ ಕುಣಿ ಕುಣಿದಾಡುತ ಅಂದಾಗಿ ಚಂದಾಗಿ
ಕೂಡುನು ಬಾ ಬಾ ಬಾಯಂನ ಚಂದಿಬಾ
ಏದ ಮುಗಿದ ನಂತರ ಇಬ್ಬರು ನಗುತ್ತ ಹೋಗುವರು

## ೧೨ ನೇ ಪ್ರವೇಶ

ಶ್ರೀಮಂತನ ಮನೆ ಮೀರಾ ಖುರ್ಚಿಯ ಮೇಲೆ ಓದುತ್ತಾ ಕುಳಿತಿರುವಳು
ಗೌರಾ ವಳಗಿನಿಂದ ಬರುವಳು

**ಗೌರಾ—** ( ವಳಗಿಂದ ಬಂದು ) ಮೀರಾ ಬೆಳಗಿನಲ್ಲಿ ಎದ್ದು ಮಾಡ

ಬೇಕಾದ ಕರ್ತ್ತವ್ಯ ನಿಯಮಗಳನ್ನು ಮರೆತು ಕೇವಲ ಓದುತ್ತ ಕೂಡ್ರುವದು ಸ್ತ್ರೀಯರಿಗೆ ಭೂಷಣವಿಲ್ಲ ಬವ್ಮಾ

**ಮೀರಾ**— ಅಂದರೆ ಆಳಿನಂತೆ ಯಾವಾಗಲೂ ಕೀಳಾಗಿ ನಿನ್ನ ತೊತ್ತಾಗಿರಬೇಕು ಅಶಿಕ್ಷಿತರಾದ ನಿಮಗೆ ಈ ಪುಸ್ತಕದ ಬೆಲೆ ಹೇಗೆ ಗೊತ್ತಾಗಬೇಕು

**ಗೌರಾ**— ಓದಬೇಕವ್ಮಾ ಓದಬಾರದು ಅಂತಾ ಅಲ್ಲಾ ಆದರೆ ಓದುವದಕ್ಕಾಗಿ ಗೃಹಣಿಯ ಕರ್ತವ್ಯಕ್ಕೆ ಚ್ಯುತಿ ತರಬಾರದು ನೋಡು ನಾಳೆ ನೀನು ಮಕ್ಕಳ ತಾಯಿಯಾಗುವವಳು ಮಕ್ಕಳು ಉತ್ತಮ ನಾಗರೀಕರಾಗ ಬೇಕಾದರೆ ತಾಯಿಯ ಪ್ರಥಮ ಶಿಕ್ಷಣವೇ ಮುಖ್ಯ ತಾಯಿಯ ಯಾವತ್ತೂ ಶೀಲ ನೇಮಗಳು ಮಕ್ಕಳಿಗೆ ಪ್ರತಿಬಿಂಬಗಳು ಅದಕ್ಕಾಗಿ ಮನೆಗೆಲಸವನ್ನು ಮುಗಿಸಿ ಪೂಜೆಯನ್ನು ಮಾಡಿ ಬಿಡುವಿನ ವೇಳೆಗೆಯಲ್ಲಿ ಇಂಥ ಓದುವದನ್ನು ಮಾಡಬೇಕವ್ಮಾ

**ಮೀರಾ**— ಯೇನೋ ಹೋಗಲಿ ಅಂದ್ರೆ ಲಕ್ಚರನೇ ಪ್ರಾರಂಭಿಸಿದಿರಲ್ಲಾ ನನ್ನ ಮನಬಂದಾಗ ಸ್ನಾನ ಸಂಧ್ಯಾನಗಳನ್ನು ಮಾಡಿ ಊಟಮಾಡುತ್ತೇನೆ ಪೂಜಿ ಪುನಸ್ಕಾರಗಳನ್ನು ಮಾಡುತ್ತಾ ಕುಳಿತು ಕೊಳ್ಳಲು ನಾನೇನು ಸನ್ಯಾಸಿ ಅಲ್ಲಾ

**ಗೌರಾ**—ಪೂಜೆ ಧ್ಯಾನಗಳಲ್ಲಿ ಅನಂತ ಸುಖಶಾಂತಿ ದೊರೆಯುವದವ್ಮಾ

**ಮೀರಾ**— ಈ ತತ್ವಕ್ಕೆ ಬಲಿಯಾಗಲು ನಾನೇನು ಹಳೆಯ ಕಾಲದ ಹುಚ್ಚು ಹೆಂಣಲ್ಲಾ ದೇವರಂತೆ ಪೂಜೆಯಂತೆ ನಿತ್ಯ ನಿನ್ನ ವಾಣಿಯನ್ನು ಕೇಳಿ ಕೇಳಿ ನನ್ನ ತಲೆ ಹಿಡಿಯಿತು. ವಂದುದಿನ ಯಾವತ್ತೂ ದೇವರನ್ನೆಲ್ಲಾ ಭಾವಿಯಲ್ಲಿ ಚಲ್ಲಿಬಿಡುತ್ತೇನೆ.

**ಗೌರಾ**— ಮೀರಾ ನಿನ್ನ ಮನ ಬೆಳಗುವ ನಿನ್ನ ಜ್ಞಾನದೀಪಕ್ಕೆ ಮಂಕು ಬಡದಿದೆಯವ್ಮಾ ಅಂತೆಯೇ ಧರ್ಮ ದೇವರು ಇವೆಲ್ಲ ತೃಣಸಮಾನವಾಗಿವೆನಿನಗೆ ಇಂಥ ಹುಚ್ಚು ಕಲ್ಪನೆಯಿಂದ ನಡೆದ ನಿನ್ನಂಥಾ ಅನೇಕ ಸ್ತ್ರೀ ಸಮೂಹವು ದಾರಿತಪ್ಪಿ ವೇದನೆಯಲ್ಲಿ ಪರಿತಪಿಸುತ್ತಿದ್ದಾರೆ. ಮೀರಾ ಯೌವನಾ ಶೃಂಗಾರ ಬೆಡಗು ಇವೆಲ್ಲ ಅಸ್ಥಿರಸುಖ ವಿವೇಕದ ಪರದೆ ಹರಿದು ನೋಡಿದಾಗ ಸ್ತ್ರೀಯ ನಿಜತತ್ವ ಆಗ ಅರಿವಾಗುತ್ತದೆ.

**ಮೀರಾ—** ಯೇ ಮುದಿಗೂಬೇ ಸಾಕುಮಾಡೆ ನಿನ್ನ ಗೊಡ್ಡು ಪುರಾಣ ಹೋಗು ಒಳಗೆ ನನ್ನೆದುರಿನಲ್ಲಿ ನಿಲ್ಲಬೇಡಾ

**ಗೌರಾ—** ನನ್ನ ಮುಖ ನೋಡಲು ಸಹನೆಯೇ ನಿನ್ನಲ್ಲಿ ಇಲ್ಲದಾಗ ನನ್ನ ಸದ್ಗುಣಗಳ ವುಪದೇಶ ಬೋರ್ಗಲ್ಲಿನ ಮೇಲೆ ಮಳೆಗರೆದಂತೆ ನಿನ್ನ ಮನಸ್ಸಿಗೆ ಬಂದಂತೆ ಮಾಡು ಇಂದಿಲ್ಲ ನಾಳೆಯಾದರೂ ಗರತಿ ಜೀವನದ ಪಾಠ ಪಠಿಸದೆ ಇರಲಾರಿ (ಒಳಗೆ ಹೋಗುವಳು).

(ಮೀರಾ ತನ್ನ ಹತ್ತಿರವಿರುವ ಚಂದ್ರುವಿನ ಫೋಟೋ ನೋಡುತ್ತ ಪದಾ ಅನ್ನುವಳು)

### ಮೀರಾನ ಪದ

ರಾಗ- ಮಿಶ್ರಪಹಾಡಿ. ತಾಳ- ಕಿವಾಲಿ.

ಸರಸವಿಲಾಸ ಇದೇನೋ। ಮಧುರ ಮೋಹವಿದೇನೋ ॥
ಮಧುಮಧುರ ಮೋಹ ಮನಕಾನಂದ ಬೀರುವ
ಬಾರೋ ಪ್ರಣಯ ಪರಿಹಾಸಾ ॥
ಮಧುಮಧುರ ಮೋಹಪಾಸಾ ॥ ಆ ಆ ಆ ಆ ॥
ಸರಸ ವಿಲಾಸವಿದೇನೋ ॥

(ಪದ ಮುಗಿದ ನಂತರ ಫೋಟೋ ನೋಡುತ್ತ ಕೂಡ್ರುವಳು. ಚಂದ್ರು ಮೆಲ್ಲಗೆ ಬಂದು ಕಂಣು ಮುಚ್ಚುವನು)

**ಮೀರಾ—** (ಸಾವಕಾಶವಾಗಿ ಗುರ್ತಿಸಿ) ಛೀ ! ಕೈಬಿಡಿ ಮೊದಲು ಯಾರಾದರೂ ನೋಡಿದರೆ....

**ಚಂದ್ರು—** ನಿರ್ಭಯವಾಗಿ ಲಾಯಸನ್ಸ ಸಿಗುತ್ತೆ ಇನ್ನೇನಾಗತ್ತೆ

**ಮೀರಾ—** ನೀವಂತೂ ಬಹು ಹುಡುಗಾಟಿಕೆಯವರು ನಿಮ್ಮದೇ ಸಾಧಿಸ ಬೇಕೆನ್ನುವವರು ನೀವು ಹೀಗೆಲ್ಲಾ ಮಾಡುವ ವರ್ತನೆಯ ಸುಳಿವು ನಮ್ಮ ಆತ್ತೆ-ಮಾವಂದರಿಗೆ ಗೊತ್ತಾದಂತಿದೆ ನಮ್ಮ ಮಾವನಂತೂ ನನ್ನನ್ನು ಕಂಡರೆ ಹಾವಿನಂತೆ ನೋಡುತ್ತಾನೆ ಹುಲಿಕರಡಿಗಳಂತೆ ಗದರಿಸುತ್ತಾನೆ.

**ಚಂದ್ರು—** ಅಂದಬಳಿಕ ಆ ಕ್ರೂರ ಪ್ರಾಣಿಗಳನ್ನು ನಾಶಗೊಳಿಸದೆ ತಂಣಗೆ ಕೂಡ್ರಬೇಕೆ ಸಿರಿಯಸಿಂಹಾಸನವನ್ನೇರಿದ ನಿನ್ನ ಕಾಲಚಕ್ರದ ಗತಿ

ಯಲ್ಲಿ ಸಿಕ್ಕು ತೊತ್ತಿ ನಂತಿರುವ ಅತ್ತೆ ಮಾವಂದಿರಗೆ ಹೆದರಬೇಕೆ ನನ್ನ ನಿನ್ನ ಮಮತೆ ಸ್ಥಿರವಾಗಿರ ಬೇಕಾದರೆ ನಾಹೇಳಿದಂತೆ ನಟಿಸು

**ಮೀರಾ**— ಇದೆಲ್ಲ ನಿಜ ಆದರೆ ಅದೊಂದು ಅಡ್ಡಾಗಿದೆಯಲ್ಲಾ ನನ್ನ ಕೊರಳಿಗೆ ಮಾಂಗಲ್ಯವನ್ನು ಕಟ್ಟಿದ ಗಂಡು ಅವರೆಲ್ಲರೂ ವಂದಾಗಿ ನನ್ನನ್ನು ಯೇನು ಮಾಡುವರೋ ಯೇನೋ ಯಂದು ಅದೊಂದು ಅಧೈರ್ಯ

**ಚಂದ್ರು**— ಅಧೈರ್ಯ ಪಡುವಪ್ರಾಣಿಯೆಂದರೆ ಹೆಂಣೆಂಬುವದು ಹುಸಿಯಲ್ಲಾ ನೀನೇನು ಅಂಥ ಇಂಥ ಹೆಂಣಲ್ಲಾ ಬೇಕಾದಷ್ಟು ಕಲಿತವಳು ಮೇಲಾಗಿ ಆ ಗರ್ಭ ಶ್ರೀಮಂತರ ಮಗಳು ಹೀಗಿದ್ದು ನಿನ್ನ ನಟನೆಯನ್ನು ಬೀರಿ ಮುಳ್ಳಿನಿಂದಲೇ ಮುಳ್ಳು ತಗೆದಂತೆ ಆ ಕಳ್ಳನಿಂದಲೇ ಅವರನ್ನು ಸಂಹ ರಿಸುವ ಕಾರ್ಯವಾಗಬೇಕು ಅಂದರೆ ನಮ್ಮ ಬಾಳು ಸುಗಮವಾಗಿ ಸಾಗು ವದು ನೋಡು ವಿಚಾರಿಸಿ ವಂದು ದಾರಿಗೆ ಬಾ

**ಮೀರಾ**— ಅಂತೂ ನೀವು ಬಲು ಗಟ್ಟಿಗರು

**ಚಂದ್ರು**— ಮೀರಾ ಇಂದಿನ ಸಮಾಜದಲ್ಲಿ ಘಟ್ಟಿ ಇಲ್ಲದವನು ಖೊಟ್ಟಿ ನಾಣ್ಯ ಯಲ್ಲರನ್ನು ಮೆಟ್ಟಿ ನಿಲ್ಲುವವನೆ ಜಗಜಟ್ಟಿ ಅಂತೇ ಇಂದಿನ ಮುಂದಾಳು ಗಳು ಅಲ್ಲವಾದದನ್ನು ಮಾಡಿದರೂ ಬೆಲ್ಲದಂಥಾ ಮಾತುಗಳನ್ನಾಡಿ ಶ್ರೀಮಂತಿ ಕೆಯ ಕೊಬ್ಬಿನಲ್ಲಿ ಪರಸತಿಯರೊಡನೆ ಲೋಲುಪ್ತರಾಗಿ ಮೆರೆದರೂ ಅಂಥವ ರಿಗೆ ಮಾತ್ರ ಇನ್ನು ಗಣ್ಯಸ್ಥಾನ ಬಿಟ್ಟಿಲ್ಲಾ ಅಂದಬಳಿಕ ನಾವೇಕೆ ಈಕಾರ್ಯಕ್ಕೆ ಅಂಜಬೇಕು ತಿಳಿದು ನೋಡು ಹಾಂ ಅದಿರಲಿ ಮೀರಾ ಯೇನನ್ನು ಓದುತ್ತಾ ಕುಳತಂತಿತ್ತು

**ಮೀರಾ**— ಯೇನೂ ಇಲ್ಲಾ ಕವಿತಾ ಬುಕ್ಕು ಓದುತ್ತಿದ್ದೆ

**ಚಂದ್ರು**— ಅದಾವಕವಿತೆ ಯೇ ರಸ ಹೀನವಾದ ಕವಿತೆಯ ಬುಕ್ಕು ಕಸ ಹೀನವಾಗಿವೆ

**ಮೀರಾ**— ಛೆ ಛೆ ವಳ್ಳೆಕವಿತಾಯಿದೆ ಕನಸು ಅಂತಾ ಸಿರೋನಾಮ ವಿರಹ ಅಂತಾಕ ವಿತಾನಾಮ

**ಚಂದ್ರು**— ತಮ್ಮ ಪ್ರಾಣಿಯಿಂದಾ ಅದನ್ನು ನುಡಿಸಿದಾಗ ಅದು ರಸವೋ ಕಸವೋ ತಾನೇ ಗೊತ್ತಾಗುತ್ತದೆ

**ಮೀರಾ**— ಹಾಗಾದರೆ ಈಗ ನನ್ನಿಂದಾ ಹಾಡಿಸಬೇಕಾಗಿದೆ ಯಲ್ಲವೇ

**ಚಂದ್ರು**— ಮೀರಾ ಕೋಗಿಲೆಯಂಥಾ ನಿನ್ನ ಸುಮಧುರ ಕಂಠ ನನ್ನ ಸ್ನೇಕೆ ವಿಶ್ವವನ್ನೇ ತಲ್ಲೀನವಲ್ಲಿ ಮುಳುಗಿಸುವ ಹಿರಿಯ ಸ್ಥಾನವಲ್ಲಿದೆ ಹಾಡು ಹಾಡಿ ಈ ಮನದ ಬೇಸರ್ರವದೂಡಿ ನಿನ್ನ ಪ್ರೇಮಾವ್ರುತವನ್ನು ನೀಡು ಮೀರಾ.

**ಮೀರಾ**— ಇದು ಯೇಕಾಂತ ಸ್ಥಳವಲ್ಲಾ ಮನೆ

**ಚಂದ್ರು**— ಮನೆ (ನಗು) ಮನೆ ಮತಾ ಯಾವದಕ್ಕೂ ಭಯಪಡ ಬೇಡಾ ಇದೋ ನಾನಿರುವ ವರೆಗೆ ಭಯವೆಂಬುವದೇ ಮರೆತುಬಿಡು ಹುಂ ಬೇಗ ಹಾಡು.

**ಮೀರಾನ ಪದಾ**

ರಸಭರಿತ ಯೌವನಾ ಹೊಂದಿರುವ ಜೀವನ ।
ಅಂದದಲಿ ಶೋಭಿಸುವ ವೃಂದಾವನಾ ಆ ಆ ॥ ೧ ॥
ಸೀಭರಿದ ಗೀತೆಯು ಯನ್ನದೆಯ ಪ್ರೀತಿಯು ।
ಮನತುಂಬಿ ತನುತುಂಬಿ ಜೋತಿಯಾ ಜೋತಿಯಾ ।
ಜೋತಿಯಾ॥ ರಸಭರಿತ ॥

**ಚಂದ್ರು**— ಮೀರಾ ನೀನು ನಿಜವಾಗಿಯು ಕಲಾವತಿ ನಿನ್ನಂಥಾ ಅನು ಪಮ ರತ್ನಗಳಿಂದಲೇ ಕಲೆ ಬಾಳಿ ಬೆಳೆಯ ಬೇಕಾಗಿದೆ ಈ ನಿನ್ನ ಮೃದುವಾದ ಕಂಠ ನನ್ನನ್ನು ದಗ್ಧನನ್ನಾಗಿ ಮಾಡಿದೆ ಈ ನಿನ್ನ ಪ್ರೀಯತಮನನ್ನು ( ಅಪ್ಪುವನು )

( ಈಶ್ವರಪ್ಪನು ಪ್ರವೇಶಿಸಿ ಅದನ್ನು ನೋಡಿ )

**ಈಶ್ವರಪ್ಪಾ**— ಹಾಂ ಇದನ್ನೇನು ನೋಡುತ್ತಿರುವೆ ಇವಳು ನನ್ನ ಸೊಸೆಯೋ ನಿಜ ಆ ಮಾರಿಯೇ ನಿಜ ( ಸಿಟ್ಟಿನಿಂದ ) ಮೀರಾ ನೀನೆಲ್ಲಿರುವೇ ನಿನೇನು ಮಾಡುತ್ತಿರುವೆ ಇದು ನಿನ್ನ ಜ್ಞಾಪಕದಲ್ಲಿರುವದೇ ಮಾನವಂತರ ಮನೆಯನ್ನು ಮಾಟಗಾರತಿಯಾದ ನೀನು ಸೂಳಿಗೇರಿಯನ್ನಾಗಿ ಮಾಡಿದಿ ಯಲ್ಲಾ ಇವನಾರು ನೀಚ ಚಂದ್ರು ನನ್ನ ಮಗನ ನಂಬುಗೆಯ ಸ್ನೇಹಿತನಾಗಿ ಅವನ ಬಾಳು ಮಂಣು ಗೂಡಿಸಿದಿಯಾ ಪಾಪಿ ನೀನು ನನ್ನ ಮಗನ ಸ್ನೇಹಿತ ನಲ್ಲಾ ಅವನಿಗಾಗಿ ನಿಂತ ವೈರಿ ನನ್ನ ಮನೆಗೆ ನೀವಿಬ್ಬರೂ ವಿಷಕಾರಿ ಮೀರಾ ( ಹೊಡಿಯಲು ಹೋಗುವನು )

**ಮೀರಾ**— ಛೀ ಯೇಕೆ ನರಹರಿಯುವ ಹಾಗೆ ವದರುತ್ತಿರುವಿ ನಿನ ಗೇನಾಗಿದೆ ತಲೆ ಕೆಟ್ಟದೆಯೇನು

**ಈಶ್ವರಪ್ಪಾ**— ನಿಜಾ ಈ ನಿನ್ನ ವರ್ತನೆಯ ನೋಡಿ ಹುಚ್ಚು ಹಿಡಿದಿದೆ ನನ್ನ ಮನೆಯ ಹಾಲುಸಾಗರದಲ್ಲಿ ವಿಷ ಬೆರಿಸಿದಳಲ್ಲಾ ಯಂದು ಕಸಬಿಸಿಯಾಗಿದೆ ಹಸುವಿನಂತಿದ್ದ ನನ್ನ ಮಗನಿಗೆ ಕಾಳಸರ್ಪ ಜತೆಯಾಯಿತಲ್ಲಾ ಯಂದು ಮನವುರಿಯುತ್ತಿದೆ ಮುತ್ತೈದೆಯರ ಈ ಮಂಗಲದ ಮನೆಯನ್ನು ಸೊಸೆಯು ಸ್ಮಶಾನದಂತೆ ಮಾಡಿದಳಲ್ಲಾ ಯಂದು ತಲೆಗೆ ವಜ್ರ ಘಾತವಾಗುತ್ತಿದೆ ನೀನು ಕಾಳಿರಕ್ಕಸಿ ಮರ್ಯಾದೆಯ ಮಾನವಂತಿಯಲ್ಲಾ ಸೌಭಾಗ್ಯ ಲಕ್ಷ್ಮಿಯಂತಾ ಸೊಸೆಯಲ್ಲಾ ಭಾಗ್ಯರತ್ನಳಾಗಿ ಬಾಳುವ ಕುಲವತಿಯಲ್ಲಾ ಕುಲನಾಶಕಿ ವಂಚಕಿ ನಿನ್ನ ಮದುರ್ವರ್ತನೆಯನ್ನು ಸಹಿಸಲಾರೆ ನಿನ್ನಂ ಜೀವದಿಂದಾ ವುಳಿಸಲಾರೆ ಘಾತಕಿ

ಮೀರಾನ ಕುತ್ತಗಿ ಹಿಚಗಲು ಹೋಗುವನು ಮೀರಾ ಚೀರುವಳು ಗೌರಮ್ಮನು ವಳಗಿಂದ ಬರುವಳು ರಘು ಹೊರಗಿನಿಂದ ಪ್ರವೇಶಿಸುವನು

**ರಘು**— ಅಪ್ಪಾ ಇದನ್ನೇನು ಮಾಡುತ್ತಿರುವೆ

**ಚಂದ್ರು**— ತನ್ನಸ್ವಾರ್ಥಕ್ಕೆ ಅಡ್ಡಾಗಿ ನಿಂತಿರುವ ತನ್ನ ಮಗನ ವಂಶ ಕುಡಿಯನ್ನು ಕತ್ತರಿಸಿ ಹಾಕುವ ಕಾರ್ಯ

**ಮೀರಾ**— ಅಯ್ಯೋ ಸ್ವಾಮಿ ಸ್ವಾಮಿ ( ರಘುವಿನ ಪಾದಹಿಡಿದು ದುಃಖದಿಂದ ) ಈ ಕಟುಗರ ಕೈಯಿಂದಾ ನನನ್ನು ರಕ್ಷಿಸಿರಿ ನಿಮ್ಮ ಮನೆಗೆ ನಾನು ಬೇಡವಾಗಿದ್ದರೆ ನೀವೇ ನಿಮ್ಮ ಕೈಯಿಂದ ಕೊಂದರೂ ಚಿಂತೆಯಿಲ್ಲಾ ಈ ಪಾಪಿಗಳ ಕೈಯಲ್ಲಿ ನನ್ನನ್ನು ಕೊಡಿಬೇಡ್ರಿ

**ರಘು**— ಅಪ್ಪಾ ನನ್ನ ಸತಿಯಮೇಲೆ ಇಷ್ಟೇಕೆ ಮತ್ಸರ ನನ್ನ ಪ್ರೇಮದ ಮಡದಿಯ ಪ್ರಾಣಹೀರಿ ನನ್ನ ಬಾಳು ಹಾಳು ಮಾಡಬೇಕೆಂದಿರುವಿರಾ ನನ್ನ ಸತಿಭಾಗ್ಯವತಿ ಇಂಥವಳು ನಿಮಗೂ ಸೊಸೆಯಲ್ಲವೇ

**ಈಶ್ವರಪ್ಪಾ**— ನಿನ್ನ ಸತಿ ಆದರ್ಶಸತಿಯಾಗಿ ನಮ್ಮ ಸೊಸೆಯಾಗಿದ್ದರೆ ನಮ್ಮ ಸರ್ವಸ್ವವನ್ನು ಆವಳಿಗೊಪ್ಪಿಸಿ ದಾಸಾನು ದಾಸರಾಗುತ್ತಿದ್ದೆವು ಇವಳು ಆದರ್ಶ ಸತಿಯಾಗಲಿಲ್ಲಾ ಈ ನೀಚ ಚಂದ್ರುವಿನ ಸೂಳೆಯಾಗಿ ಆ ಗರ್ಭ

ಶ್ರೀಮಂತರಾದ ನಮ್ಮ ಮರ್ಯಾದಿಗೆ ಕಲಂಕು ತರುವ ಕುಲಪಾತಕಿ ಯಾಗಿದ್ದಾಳೆ

**ಚಂದ್ರು**— ( ಸ್ವಗತ ) ಇಂಥ ಹೇಯ ಪ್ರಸಂಗದಿಂದ ಪಾರಾಗಲು ತಾನು ಆ ಪ್ರಕರ್ಣವನ್ನು ನನ್ನ ಮೇಲೆ ಹೊರಳಿಸಿದನೇ

**ಗೌರಾ**— ರಘು ನಿನ್ನ ಹೆತ್ತವರು ನಿಜವನ್ನೇ ಹೇಳುತ್ತಾರೆ ಇಂದಿಲ್ಲ ನಾಳೆ ಬುದ್ಧಿವಂತಳಾಗ ಬಹುದೆಂದರಿತ ಇವಳು ಮಾಡುವ ರೀತಿ ಕಂಣಾರೆ ಕಂಡರೂ ಮಗನೆದರು ಹೇಳಿದರೆ ಮನ ನೋವಾಗ ಬಹುದೆಂದು ಮೌನವಾಗಿ ಪ್ಪರೂ ಹದ್ದು ಮೀರಿದೆ ನಿನ್ನ ಸತಿಯದುರಾಶೆ

**ಮೀರಾ**— ಮುಚ್ಚು ಬಾಯಿ ಮುದುಕೆಯಾಗಿ ರತಿ ಕ್ರೀಡೆ ಸರಸ ಸಲ್ಲಾಪದವರ್ಣನೆ ಮಾಡುವ ನಿನಗೆ ಕಾಮ ಮದವೇರಿದೆ ಅತಿಸುಶಿಕ್ಷಿತಳಾದ ನಾನು ನಿಷ್ಕಾಮ ಸ್ನೇಹದಿಂದ ಚಂದ್ರು ವಿನೊಡನೆ ವರ್ತಿಸಿದ್ದು ಜಾರತನವಾಗಿ ಕಾಣುವೇ ನಿಮ್ಮ ಕಂಣಲ್ಲಿ

**ಈಶ್ವರಪ್ಪಾ**— ಇಲ್ಲಾ ಮಹಾಗರತಿಯಾಗಿ ಕಾಣುತ್ತಿರುವೆ ವಳವಳಗೆ ಮನೆಯಮಾನವನ್ನು ಅಳಕಿಸುವ ಇಂಥ ಹೀನ ಕೃತಿಗಳನ್ನು ಮಾಡದೆ ನಾಟಕ ದಲ್ಲಿ ನಟಿಯಾಗಿ ಸಾಗಿದ್ದರೆ ಬಹುಬೆಲೆಯಿತ್ತು ನಿನ್ನ ಬಾಳಿಗೆ

**ಮೀರಾ**— ಅಯ್ಯೋ ನೋಡಿ ಇವರಾಡುವ ನುಡಿಯನ್ನು ಕೇಳಿ ಸಹಿಸ ಲಾರೆ ಬೇಡಾ ಇನ್ನು ನನ್ನನ್ನುಳಿಸುವದೇ ಬೇಡಾ ಕೊಂದು ಬಿಡಿರಿ.

**ಚಂದ್ರು**— ನೆಚ್ಚಿ ಬಂದ ಪತಿಯೇ ಮೌನವಾಗಿರಲು ಇಲ್ಲಿ ನಿಮ್ಮರೋ ಧನ ಅರಣ್ಯರೋಧನ ನಿಮ್ಮ ಆಶ್ರಯದಾತನೇ ಪಿತನ ಕೈ ಗೊಂಬೆಯಾಗಿ ನಿಂತಿ ರುವಾಗ ಸತ್ತು ಹೋಗಬೇಕು ಇಲ್ಲವೇ ಈ ಮನೆಯಿಂದಾ ತೊಲಗಿ ಹೋಗ ಬೇಕು ಇವೇ ಅವರಿನ್ನು ಕೊಡುವವುತ್ತರಾ

**ಈಶ್ವರಪ್ಪಾ**— ಯಲ್ಲರಿಗೂ ಕಿಚ್ಚು ಕೊಟ್ಟು ಹೋಗಬೇಕೆಂದ ನಿಂತ ಇವಳು ತಾನು ಮನೆ ಬಿಡುವಳೇ ಈ ಕುಲಪಾತಕಿ

**ರಘು**— ಅಪ್ಪಾ ಮೇರೆ ಮೀರಿತು ನಿಮ್ಮ ಅವಿವೇಕತನಕ್ಕೆ ಇವಳಿಗೆ ಹೊರ ದೂಡುವಿರಾ ನಿವೀನ್ನು ಆಲೋಚಿಸಿರಿ ಇವಳು ಹೇಳಿದಂತೆ ಕೇಳಿಕೊಂಡು ಬಿದ್ದಿರಲು ನಿಮಗೆ ಆಗದಿದ್ದರೆ ಇಂದೇ ಈ ಮನೆಯಿಂದಾ..................

( ಅನ್ನುವಷ್ಟರಲ್ಲಿ ಈಶ್ವರಪ್ಪನು ರಘುವಿನ ಕಪಾಳಕ್ಕೆ ಹೊಡೆದು )

**ಇಶ್ವರಪ್ಪಾ**— ಮುಚ್ಚು ಬಾಯಿ ಪಾಪಾತ್ಮೆ ನಿನ್ನ ಸತಿಯು ಹಾದರವ ಕಂಣಾರೆ ಕಂಡು ಮತ್ತೆ ಅವಳು ಹೇಳಿದಂತ ಕೇಳಿಕೊಂಡಿರಬೇಕೆ ಇಂಥ ಅವಾಚ್ಯಶಬ್ದಗಳನಾಡಲು ನಾಚಿಕೆಯಾಗುವದಿಲ್ಲವೇ ಇಂದೇ ಇವಳನ್ನೇ ಹೊರದೂಡು ಸಾವಿರಾರು ಕನ್ನೆಯರ ಕೈ ಹಿಡಿಸುವ ಯೋಗ್ಯತೆ ನನ್ನಲ್ಲಿದೆ ಆದರೆ ಇಂಥ ಪಾಪಿಯ ಮುಖವನ್ನು ನೋಡಲು ಸಿದ್ಧರಿಲ್ಲಾ

**ಮೀರಾ**— ಮಗ-ಸೊಸೆಯರನ್ನು ಕೊಂದು ಹಾಕಲು ಗಟ್ಟಿಯಾಗಿ ನಿಂತಿದ್ದಾರೆ ನೋಡಿ ಇಗಲಾದರೂ ನಿಮ್ಮ ಹೆತ್ತವರ ಸ್ವಾರ್ಥ

**ರಘು**— ನಿಜ ಹೆತ್ತ ಕರುಳೆಂದು ಕೈಕಾದರೆ ನಮ್ಮ ಕುತ್ತಿಗೆ ಕೊಯ್ಯಲು ಹಿಂದೆ ಮುಂದೆ ನೋಡರು ಅಪ್ಪಾ ನನಗೆ ತಂದೆ-ತಾಯಿಗಳು ಬೇಕಿಲ್ಲಾ ಹುಂ ನನ್ನ ಮನೆಯನ್ನು ಬಿಟ್ಟು ಇಗಲೇ ಹೊರಟು ಹೋಗಲೇಬೇಕು

**ಈಶ್ವರಪ್ಪಾ**— ಹೋಗದಿದ್ದಲ್ಲಿ ಯೇನು ಮಾಡುವಿ

**ರಘು**— ಯೇನು ಮಾಡುವಿಕೆಂದು ನುಡಿಯುವ ನಿಮ್ಮ ಪ್ರಾಣ ಪಕ್ಷಿ ಬಲಿಯಾಗ ಬೇಕಾಗುತ್ತದೆ

**ಈಶ್ವರಪ್ಪಾ**— ನೀ ನಿಷ್ಟು ಗಟ್ಟಿಯಾಗಿ ನಿಂತ ಮೇಲೆ ನಿನ್ನಂಥಾ ವಿಷ ಜಂತುವನ್ನು ನಾಶಗೊಳಿಸಿ ಈ ಮನೆ ಬಿಡುವೆ ಆಗುವ ಶಿಕ್ಷೆ ನನಗಾಗಲಿ ಪಾಪಾತ್ಮಳೇ ನನ್ನ ಪ್ರಾಣ ಹೀರುವಿಯಾ (ಹೊಡಯಲು ಹೋಗುವನು)

(ಚಂದ್ರು ರಘುವಿನ ಕೈಯಲ್ಲಿ ಪಿಸ್ತೂಲು ಸನ್ನೆಯಿಂದ ಕೊಟ್ಟು)

**ಚಂದ್ರು**— ಹುಂ ರಘು ತಡಮಾಡದಿ ಯಾದರೆ ನಿನ್ನ ಪ್ರೇಮದ ಸತಿಯ ಪ್ರಾಣಹಾರಿ ಹೋಗುತ್ತದೆ ಹುಂ ಬೇಗನೆ ಮುಗಿಸು

**ರಘು**— ಹಾಂ ನನ್ನ ತಂದೆಯ ಕೊಲೆ ಮಾಡಲ್ಯಾ

**ಚಂದ್ರು**— ಮಾಡದಿದ್ದರೆ ನೀವಿನ್ನು ಬದುಕುವಂತಿಲ್ಲಾ ಹುಂ ಹಾರಿಸು

**ರಘು**— ನಿಜ ಇದು ನಿಜ ಅಪ್ಪಾ ಇವಳ ಕೈ ಬಿಡುವಿಯೋ ಅಥವಾ ಇದಕ್ಕೆ ಬಲಿಯಾಗ ಬೇಕೆನ್ನುವಿಯೋ ಪಿಸ್ತುಲುತೋರಿಸುವನು

**ಈಶ್ವರಪ್ಪಾ**— ಯೇನು ನನ್ನ ಪ್ರಾಣಹೀರಲು ಪಿಸ್ತೂಲು ಹಿಡಿದು ಕೊಂಡು ನಿಂತಿರುವಿಯಾ ಥೂ ಪಾಪಾತ್ಮ ನಿನ್ನಂಥಾ ಹೇಡಿ ಮಗಾ ಇಂಥಾ ಹಾದರದ ಸೊಸೆಯ ಮುಖ ಕಾಣುವದಕ್ಕಿಂತಾ ಮರಣ ವಪ್ಪುವದೇ ವಿಹಿತ ಹುಂ ಹಾರಿಸು ಗುಂಡು

**ಗೌರಾ**— ( ಅಡ್ಡ ಬಂದು ) ಮಗು ನಿನ್ನ ಕಾಲ್ಹಿಡಿದು ಬೇಡುವೆ ನಿನ್ನ ಪಿತನ ಕೊಂದು ನನ್ನನ್ನು ರಂಡಿತನದಲ್ಲಿ ಕೆಡುಹ ಬೇಡಾ ಇವರು ನಿನ್ನ ಹೆತ್ತವರಲ್ಲವೇ ತಂದೆ ದೇವರಲ್ಲವೇ ಮಗು ರಕ್ಷಿಸು ರಕ್ಷಿಸು (ಕಾಲಿಗೆ ಬೀಳುವಳು)

**ರಘು**— ( ತಾಯಿಯನ್ನು ನೂಗಿಸಿ ) ಸಾಧ್ಯವಿಲ್ಲಾ ತಂದೆ–ತಾಯಿಯಂಬ ಕರುಳ ಬಂಧನವಿಲ್ಲಾ ಹೊರಟು ಹೋಗದಿದ್ದಲ್ಲಿ ಬದುಕಲು ಸಿದ್ದನಿಲ್ಲಾ ಹುಂ ಹೋಗುವಿಯೋ ಗುಂಡಿನೇಟಿಗೆ ತುತ್ತಾಗುವಿಯೋ ಹೇಳು ಯರಡಲ್ಲಿ ವಂದುತ್ತರಾ

**ಈಶ್ವರಪ್ಪಾ**— ಇ ನನ್ನ ಮನೆಯನ್ನು ಬಿಟ್ಟು ವಂದಡಿ ಮುಂದಿಡಲಾರೆ

**ಚಂದ್ರು**— ಹುಂ ರಘು ಹಟಬಿಡುವಂತಿಲ್ಲಾ ಹಾರಿಸು ಗುಂಡು

**ರಘು**— ಹಾಗಾದರೆ ಅನುಭೋಗಿಸು (ಪಿಸ್ತುಲು ಹಾರಿಸುವನು ಗೌರಮ್ಮನು ಅಡ್ಡಬರುವಳು ಅವಳಿಗೆ ಗುಂಡು ಬಡಿಯುವದು ಗೌರವ್ವನುಚೀರಿ ಮಗು ಮಗು ಯಂದು ನೆಲಕ್ಕೆ ಬೀಳುವಳು)

**ಈಶ್ವರಪ್ಪಾ**— ಗೌರಾ ಗೌರಾ ನನ್ನ ಭಾಗದ ಮರಣವನ್ನು ನೀನಪ್ಪಿದಿಯಾ ನಿನ್ನ ಪತಿಯನ್ನುಳಿಸಲು ಗುಂಡಿಗೆ ಆಹುತಿಯಾದಿಯಾ ಹೊತ್ತು ಹೆತಮಗನ ಕೈಯಿಂದಲೇ ಕೊಲೆಯಾದಿಯಾ ಗೌರಾ ನೀನೇ ನನ್ನ ಮನೆಯ ಬಾಗ್ಯಲಕ್ಷ್ಮೀ ಗೌರಾ ಗೌರಾ

**ರಘು** — ಯೇನು ನನ್ನ ತಾಯಿಗೆ ಗುರಿಇಟ್ಟನೇ ತಾಯಿಯು ಪ್ರಾಣನೀಗಿ ಹಳೇ ನಾನು ಕೊಲೆಗಾರನಾದೆ ಅಯ್ಯೋ ನನ್ನನ್ನು ಬಂದಿಸದೆ ಬಿಡಲಾರರು ಮೀರಾ ಚಂದ್ರು ಹೇಗೆ ಮಾಡಬೇಕು.

**ಚಂದ್ರು**— ರಘು ಸಮಯ ಮೀರಿ ಹೋಗಿದೆ ನೀನಿಲ್ಲಿದ್ದರೆ ಬಂಧಿಸದೆ ಬಿಡರು ಬೇಗ ನೀನೊಂದು ಕಾರ್ಯ ಮಾಡು (ಕಿವಿಯಲ್ಲಿ ಹೇಳಿ) ಹುಂ ಬೇಗ ಫರಾರಿಯ್ಯಾಗು (ರಘು ಓಡಿ ಹೋಗುವನು) ಮೀರಾ ನಾನು ಪೋಲಿಸ ಸ್ಟೇಶನಕ್ಕೆ ಹೋಗಿ ಪೋನ ಮಾಡಿ ಬಂದು ಮುಂದಿನ ಕಾರ್ಯ ಮಾಡುತ್ತೇನೆ ನೀನು ದೈರ್ಯವಾಗಿ (ಹೋಗುವನು)

ಮೀರಾ ನಗುತ್ತ ನಿಲ್ಲುವಳು

**ಈಶ್ವರಪ್ಪಾ**— (ಗೌರಾ ಗೌರಾ ಯಂದು ದು:ಖಿಸುತ್ತಾ ಕೂಡ್ರುವನು)

# ೧೩ ನೇ ಪ್ರವೇಶ

ರಸ್ತಾ-

**ಸಂಗ**— (ಅಳುತ್ತ) ನಿಂಗೀ ನಿಂಗೀ ಕಡಿಗೆ ನನ್ನ ನುಂಗಿ ಹೋದಾ ಆಕ್ಕಾ ತವಪ್ಪಾ ಕೂಡಿಗತ್ತ ಹಚ್ಚಿ ಓಡಿ ಹೋದರ‍್ಯಾ ಆಯ್ಯೋ ದೇವರ ಮೂರು ವರ್ಷ ವಂದ ವುಪಾಸ ಯಡ್ಡ ವುಪಾಸಕಳೆದು ಮುನ್ನೂರೂಪಾಯಿ ಬಚ್ಚಿಟ್ಟಿದ್ದೆ ಆ ಮಡ್ಡು ಹೋತು ಲೇ ರಾಮಾ ಅಳಿಯಾ ಅಂತಾ ಮನಿ ಹೊಕ್ಕು ಅಕ್ಕನ ಕೂಡಿಕೊಂಡು ಹೋಗಿ ನನ್ನ ಗೋಣ ಮುರಿದ್ಯಾ ಈ ನನ್ನ ಗೋಳು ನಿನಗೆ ತಟ್ಟದ ಹೋಗುದಿಲ್ಲಾ ಯಪ್ಪಾ ಬಸವಂಣ್ಣಾ ಯಂಥಾ ಹೊತ್ತ ತಂದೆಪಾ ನಾ ಯ್ಯಾಂಗ ಮಾಡಿಲಿಉರಾಗ ಮಾರಿಹ್ಯಾಂಗ ತೋರಿಸಲಿ ನಿಂಗೀ ನಿಂಗೀಮುರಿದ್ಯಾ ನನ್ನ ಬಾಳಿನ ಟೊಂಗಿ (ಅಳುವನು)

**ಅಶೋಕ**— (ಯುದುರಿಗೆ ಬಂದು) ಸಂಗಾ ಯೇಕೋ ಅಳುತ್ತಾ ನಿಂತಿರುವಿಯಲ್ಲಾ

**ಸಂಗ**— ಅಳೂದು ಯಾಕ್ರಿ ಇನ್ನ ಸ್ವಲ್ಪ ತಡದ್ರ ಶಂಖವಾದ್ಯನೂ ಚಾಲು ಆಗತ್ತ ನನ್ನ ಬಾಳೇ ಹಾಳಾಗಿ ಹೋತ್ರಿ ನನ್ನ ಹೇಣ್ತಿ ತವಪ್ಪಾ ಅಂತಾ ಮನಿಸೇರಿಸಿಕೊಂಡು ಓಡಿ ಹೋಗ್ಯಾಳ್ರಿ ಅವನ ಕೂಡ ಅಯ್ಯೆಯ್ಯೊ ಯಪ್ಪಾ ವಕೀಲ್ರಿ ಹ್ಯಾಂಗ ಮಾಡ್ಲಿ ಸಮಾಧಾನ ಇಲ್ರಿ

**ಅಶೋಕ**— ಯೇನು ಓಡಿ ಹೋದಳೆ ನಿನ್ನ ಹೆಂಡತಿ ಹಾಗಾದರೆ ಅವಳ ಸೋಟ ಚೀಟಿ ಕೊಟ್ಟುಬಿಡಲ್ಲಾ

**ಸಂಗ**— ಯಾವ ಚೀಟಿಕೊಟ್ರು ಯೇನ್ನೈತ್ರಿ ನನಗ ಸಾಲದ ಚೀಟಿ ಕೊಟ್ಟ ಹೋಗ್ಯಾಳ ಯಪ್ಪಾ ಹರದ ಬಾಳೇ ಹಚ್ಚೂದು ಬಿಟ್ಟು ಇನ್ನಷ್ಟ ಹೊಟ್ಟ್ಯಾಗ ಬೆಂಕೀ ಹಾಕತಿರಲ್ಲಾ ಯಪ್ಪಾ ಹೇಣ್ತಿ ಇಲ್ಲದ ನಾಹ್ಯಾಂಗ ಬದಕಲ್ರಿ ಯಂಥಾ ಕೆಟ್ಟ ಕಾಲರಿಯಪ್ಪಾ ಗಂಡಗ ಕೈ ಕೊಟ್ಟು ಹೋಗು ಹೆಂಣು ತಾಯಿ ಕೊಲ್ಲು ಗಂಡು ಹುಟ್ಟೇ ಇಂಥಾ ಕಾಲ ಬಂದಾವ್ರಿ ವಕೀಲ್ರ

**ಆಶೋಕ**— ಯೇನು ತಾಯಿಯ ಕೊಲೆ ಯೇನಾಯಿತು ಯಲ್ಲಿ ಆಯಿತು

**ಸಂಗ**— (ಸ್ವಗತ) ಹೊಡದಾಟ ಬಡಿದಾಟ, ಸುದ್ದಿ ಅಂದ್ರ ಬೆಂಕಿಗೆ

ಬೆಕ್ಕ ಬಾಯಿ ತಗದಂಗ ಮಾಡತಾರ ವಕೀಲರು (ಪ್ರಕಟ) ಯಪ್ಪಾ ನಿಮಗ ಸುದ್ದಿ ಇನ್ನೂ ಇನ್ನೂ ಬಡದಿಲ್ಲೇನ್ರಿ ರಘಪ್ಪನವರು ಗೌರಮ್ಮನ ಕೊಂದು ಓಡಿ ಹೋಗಿ ನಮ್ಮ ವಡಿಯಾನ ಮನಿ ಮುಳಗಿಸಿಸನ್ರಿ ಮತ್ತ ನನ್ನ ಹೇಣ್ತಿ ಓಡಿ ಹೋಗಿ ನನ್ನ ಮನಿ ಮುಳಗಿಸಿದಳ್ರಿ

**ಅಶೋಕ**— ಯೇನು ಗೌರಮ್ಮನವರ ಕೊಲೆಯಾಯಿತೇ ಅದು ರಘು ವಿನಿಂದ ಆಯಿತೆ ಇವೇನಿದು ಆಶ್ಚರ್ಯ ಹೀಗೇಕಾಯಿತು ಸಂಗಣ್ಣಾ

**ಸಂಗ**— (ಚಂದ್ರು ಬರುತ್ತಿರುವನು ಅವನನ್ನು ತೋರಿಸುತ್ತ) ಯೂಕ ಆತು ಅಂದ್ರೆ ಅಕಾ ಅಕಾ ಬಂದ ನೋಡ್ರಿ ಮನಿ ಮುರಕಾ ಅವನಿಂದಾಸರಿ ಕೇಳ್ರಿ ಹೇಳತಾನ ——— (ಚಂದ್ರು ಬರುವನು ಸಂಗನು ಹೋಗುವನು)

**ಅಶೋಕ**— (ಅಡ್ಡ ಬಂದು) ಚಂದ್ರು ನಿಲ್ಲು ಗೌರಮ್ಮನವರ ಕೊಲೆ ಯಾಯಿತೇ

**ಚಂದು** — ನಿಜ ಆಯಿತು

**ಅಶೋಕ**— ಯಾರಿಂದಾ........ರಘುವಿನನಿಂದ ಆಯಿತೇ

**ಚಂದ್ರು**— ಯಾರು ಹೇಳುವವರು ಇದು ಸುಳ್ಳು ಪೂರ್ತಿ ಸುಳ್ಳು

**ಅಶೋಕ**— ಹಾಗಾದರೆ ರಘು ಯೇಕೆ ಫರಾರಿ ಆಗಿದ್ದಾನೆ

**ಚಂದ್ರು**— ತಲೆ ಕೆಟ್ಟ ಇಶ್ವರಪ್ಪನವರು ಮಗನನ್ನು ಕೊಲ್ಲಲು ಪ್ರಯ ತ್ನಿಸಿದಾಗ ಅದು ತಪ್ಪಿ ಗೌರಮ್ಮನವರಿಗೆ ಗುಂಡು ಬಡೆಯಿತು ಮೃತಳಾದ ಗೌರ ಮ್ಮನನ್ನು ನೋಡಿ ಮತ್ತಿಷ್ಟು ಹುಚ್ಚು ನೇತಿಗೇರಿ ರಘು ನೀನೇ ಕೊಲೆಮಾಡಿದೆ ಯಂದು ಬಡಬಡಿಸ ಹತ್ತಲು ಘಾಬರಿಯಿಂದಾ ರಘು ಮನೆಯಿಂದಾ ಫರಾರಿ ಯ್ಯಾಗಿದ್ದಾನೆ ಯೇನು ಮಾಡಬೇಕು ಅಶೋಕಾ ಮುದಿ ತಂದಿ-ತಾಯಿಗಳ ಸ್ವಾಮಿತ್ವದಲ್ಲಿದ್ದವರಗತಿ ಹೀಗೆ

**ಅಶೋಕ**— ಅದಿರಲಿ ಸಧ್ಯ ಇಶ್ವರಪ್ಪನವರು ಎಲ್ಲಿ ಇದ್ದಾರೆ

**ಚಂದ್ರು**— ಪೋಲಿಸ ಸ್ಟೇಶನದಲ್ಲಿ ಹುಚ್ಚು-ಹುಚ್ಚಾಗಿ ಮಾತ್ನಾಡುತ್ತಿ ದ್ದಾನೆ ಆತನ ನಾನೇ ಕೊಲೆ ಮಾಡಿದೆನೆಂದು ಅವರೆದರು ಚೀರಾಡುತ್ತಿದ್ದಾನೆ ಪಾಪ ಪಾಪ ಹೀಗಾಗಬಾರದಾಗಿತ್ತು

**ಅಶೋಕ**— ಚಂದ್ರಶೇಖರ ಚಿಕ್ಕಂದಿನಿಂದಾ ತಂದೆ-ತಾಯಿಯಂತೆ ಜೋಪಾನ ಮಾಡಿ ವಿದ್ಯಾ-ಬುದ್ಧಿಯನ್ನು ಕಲಿಸಿ ವಕೀಲನನ್ನು ಮಾಡಿದ ಆ

ನನ್ನ ತಾಯಿಯ ಆತ್ಮ ಜ್ಯೋತಿಯು ಇಂದು ಮರೆಯಿತೆ ಇದನ್ನೆಲ್ಲವನ್ನೂ ಕೇಳಿ ನನ್ನ ಮಸ್ತಕಕ್ಕೆ ವಜ್ರಾಘಾತವಾಯಿತು ವಟ್ಟನಲ್ಲಿ ಯೇನಾ ಗಿಬಿಟ್ಟಿತಲ್ಲಾ ಅ ನನ್ನ ತಂದೆಯ ಮನೆ

**ಚಂದ್ರು**— ಅಶೋಕಾ ನಿನಗೇನು ಹುಚ್ಚು ಹಿಡಿಯಿತೇನು ನೀನೇಕೆ ಚಿಂತಿಸುವಿ ಆ ರಘು ಹಿರಿಯರೆಂದು ಮನ್ನಣೆ ಕೊಟ್ಟದ್ದರಿಂದಾ ಅಪರಾದಕ್ಕೆ ಗುರಿಯಾಗಿ ವುರುಬಿಟ್ಟು ಫರಾರಿಯಾದನು ನೋಡು ವಿಚಾರಿಸು ನೀನು ಕೂಡಾ ಹಿರಿಯರೆಂಬ ತತ್ವಕ್ಕೆ ಬಲೆಯಾದರೆ ನಿನ್ನ ಗತಿಯಾದರೂ ಹೀಗೆಯೇ

**ಅಶೋಕ**— ಚಂದ್ರು ಅದು ಯೇನೇ ಇರಲಿ ಮೊದಲು ತಂದೆ ಇಶ್ವರಪ್ಪನವರನ್ನು ಕಾಣುವಾ ಬನ್ನಿ

**ಚಂದ್ರು**— ಅಶೋಕಾ ನೀನೇಕೆ ಅಲ್ಲಿಗೆ ಹೋಗುವಿ ಪಂದು ಸಮಯ ಹೋದರು ಬಹಳ ಯಚ್ಚರವಾಗಿ ವರ್ತಿಸು ಯ್ಯಾವ ಕೇಸಿನ ಗೊಂದಲಕ್ಕೂ ಹೋಗಬೇಡಾ ಯೆಂಕದರೆ ನೀನು ಅವರ ಸಂಬದಿಕನು ಹಾಗೆಂದು ತಿಳಿದು ನೀನೇನಾದರು ವರ್ತಿಸಿದರೆ ನಿನಗೂ ಅನಿಷ್ಟ ತಪ್ಪಿದ್ದಲ್ಲಾ ಯಚ್ಚ ಇದೋ ಮತ್ತೊಂದು ವಿಷಯಾ ಪಾಪ ಮೀರಾ ದೇವಿಯ ಮೇಲೆ ಅಪವಾದ ಬರುವಂತಿದೆ ಅವಳ ಪತಿಯಿಂದಾ ತಾವು ಕೇಸು ನಡಿಸಿದರೆ ತಮಗೆ ಹತ್ತು ಸಾವಿರ ಧನ ನಾನು ಕೊಡಬಲ್ಲೆ ತಿಳಿಯಿತೇ

**ಅಶೋಕ**— ಯೇನು ಹತ್ತು ಸಾವಿರ (ನಗು) ಹತ್ತು ಸಾವಿರಾವಳ್ಳೇ ಚಾನ್ಸ ಹೇಗಾದರೂ ಮಾಡಿ ಈ ಧನ ಪಡೆಯಲೇಬೇಕೆಂದು (ನಗುತ್ತ ಹೋಗುವನು)

**ಚಂದ್ರು**— ( ವಕೀಲನು ಹೋದ ನಂತರ ನಗುತ್ತಾ ) ಹೇಗಿದೆ ನನ್ನ ಕಾರಸ್ಥಾನ ಹತ್ತು ಸಾವಿರದ ಧನವೆಂದಾಕ್ಷಣವೇ ವಕೀಲನೆಂಬ ಬಕಪಕ್ಷಿಯು ತಾನೇ ದೊಡ್ಡ ವಕೀಲನೆಂಬ ದಿಹಂಕಾರದಿಂದ ಈ ಚಂದ್ರುವಿನ ಕಾರಸ್ಥಾನವನ್ನರಿಯಿದೆ ತನ್ನ ಸಾಕು ತಂದೆಯ ಮೇಲೆ ಕೇಶು ನಡಿಸುವದ ವುದ್ದೇಶದಿಂದ ಹೊರಟು ಹೋದನು ಹೋಗು ಹೋಗುವಕೀಲಾ ನಿನ್ನ ಮಡದಿಯಾದ ಸುಶೀಲೆಯನ್ನು ಯನ್ನ ಕಾಮತೃಪ್ತಿಗೆ ಬಲೆಯಾಗುವಂತೆ ಮಾಡುವೆ ನೋಡುವಿಯಂತೆ ಈ ಚಂದ್ರುವಿನ ಕಾರಸ್ಥಾನದದ ನೋಟ (ನಗುತ್ತಾ ಹೋಗುವನು)

# ೧೪ ನೇ ಪ್ರವೇಶ

( ವಕೀಲರ ಮನೆ )

ಗರ್ಭವತಿ ಸುಶೀಲಾ ದೇವಿಯ ಮುಂಪೆ ಕುಳತಿಹಳು

**ಸುಶೀಲಾನ ಪದಾ**

**ಸುಶೀಲಾ**— ( ಆರತಿಯನ್ನು ಮಾಡಿ ) ದೇವಿ ಇಂದೇಕೆ ಈ ತರದ ಅಶುಭ ಸೂಚನೆಯನ್ನು ತೋರಿದೆ ಆನಂದದಿಂದ ಆರುತಿಯನ್ನು ಮಾಡಬೇಕೆಂದು ಬಂದಿರುವ ನನ್ನಲ್ಲಿ ಯಾವ ಕುಂದನ್ನು ಕಂಡೆ ದೇವಿ ನಾನು ಯಾವ ಅಪರಾಧ ಮಾಡಿರುವೆನೆಂದು ನನ್ನ ಮೇಲೆ ಸಿಟ್ಟಾಗಿರುವೆ ಪತಿ ಸೇವೆಯೇ ಪರ ಶಿವನ ಸೇವೆಯೆಂದು ಕಾಲ ನೂಕುವ ಈ ಮಾನಿನಿಗೆ ಕಾಯುವ ಭಾರವೆಲ್ಲವೂ ನಿನ್ನನ್ನೇ ಕೂಡಿದೆ ತಾಯಿ (ಕೈ ಮುಗಿಯುವಳು)

**ಚಂದ್ರು**— (ಮೆಲ್ಲಗೆ ಪ್ರವೇಶಿಸುತಾ) ಅಶೋಕಾ ಅಶೋಕಾ ವಕೀಲರೆ—

**ಸುಶೀಲಾ**— (ಚಂದ್ರುವಿನ ನೋಡಿ) ಅಂಣಾ ಅವರಿಲ್ಲ ಮನೆಯಲ್ಲಿ

**ಚಂದ್ರು**— ಯಪ್ಪು ಹೊತ್ತಿಗೆ ಬರಬಹುದು

**ಸುಶೀಲಾ**— ಬರುವ ಸಮಯವಾಗಿದೆ ಅಂಣಾ ಕುಳಿತುಕೋ

**ಚಂದ್ರು**— ಸರಿ ಸರಿ ಹಾಗಾದರೆ ಬೆಟ್ಟಿಯ್ಯಾಗಿಯೇ ಹೋಗೋಣ (ಕುಳಿತುಕೊಂಡು) ತಾವು ವಕೀಲರ ಸತಿಯಯೇನು (ಅತ್ತ ನೋಡುವನು)

**ಸುಶೀಲಾ**— ಹೌದು ಅಂಣಾ

**ಚಂದ್ರು**— ತಮ್ಮನ್ನು ನಾನು ವಮ್ಮೆಯಾದರೂ ಕಂಡಿಲ್ಲಾ ವಕೀಲರು ನಾವು ಕಾಲೇಜಿನಲ್ಲಿ ಕೂಡಿ ಕಲಿತವರು ಮೇಲಾಗಿ ವಳ್ಳೇ ಪರಮ ಮಿತ್ರರು

**ಸುಶೀಲಾ**— ಒಹಳ ಸಂತೋಷ ಅಂಣಾ (ಶರಗು ಸರಿ ಪಡಿಸಿಕೊಳ್ಳುವಳು)

**ಚಂದ್ರು**— ಇದೇನು ನೀವು ನಿಂತೇ ಮಾತನಾಡುತ್ತಿರುವಿರಲ್ಲಾ ಬನ್ನಿ ಹೀಗೆ ಕುಳಿತು ಕೊಳ್ಳಿ ಮಾತಾಡೋಣ

**ಸುಶೀಲಾ**— ಅಂಣಾ ಸ್ತ್ರೀಯಾಗಿ ಜನ್ಮವೆತ್ತಿದ ನನಗೆ ಪತಿಯೇ ಓರ್ವನಿಂದಲೇ ಸದ್ಗತಿ ಹೊರತಾಗಿ ಮತ್ತಾರಿಂದ ಇಂಥ ಮುಕ್ತಿ ಮಾರ್ಗವನಳಿದು

ನಿಮ್ಮಂಥವರ ಪುರಷರೊಡನೆ ಹರಟೆ ಹೊಡೆಯುವದು ಆರ್ಯ ಮಹಿಳೆಯರ ಧರ್ಮವೂ ಅಲ್ಲಾ ವಳಗೆ ನಮ್ಮ ಮಾವನವರಿದ್ದಾರೆ ಕಳಿಸುತ್ತೇನೆ (ವಳಗೆ ಹೋಗುವಳು)

**ಚಂದ್ರು**— (ನೋಡಿ) ಓಹೋ ಯುಃಕಶ್ಚಿತ ಹೆಂಗಸಾದ ನಿನ್ನಲ್ಲಿ ಯಷ್ಟೊಂದು ಬಿಂಕಬಿರ ನುಡಿಗಳು ಸುಸೀಲೆ ಮಂದಾನೊಂದು ಸಮಯ ನಿನ್ನನ್ನು ನನ್ನ ಬಲೆಯಲ್ಲಿ ಹಾಕಿಕೊಳ್ಳದಿದ್ದರೆ ನಾವು ಪುರುಷರಾಗಿ ಹಟ್ಟಿ ಫಲವಿಲ್ಲ ಹುಟ್ಟಿ ಬಂದಿರುವಳೇ ಸುಂದರವತಿ ಬಹು ದಿನಗಳಿಂದಲೂ ಇರುವದು ಇವಳ ಮೇಲೆ ನನ್ನ ಪ್ರಿತಿ ಅದಕ್ಕಾಗಿ ಮಾಡಿರುವೆ ನಾನೆಷ್ಟು ಯುಕ್ತಿ

(ಮತ್ತೆ ಕುರ್ಚಿಯ ಮೇಲೆ ಕುಡ್ರುವನು)

**ರಂಗಪ್ಪ**— (ವಳಗಿಂದ ಬಂದು) ಯಾರಪಾ ತಾವು ವಕೀಲರ ಕಡಿಗೆ ಬಂದಿದ್ದಿರ್ಯಾ ಯೇನ ಕೆಲಸವಿತ್ತು

**ಚಂದ್ರು**— ತಾವು ವಕೀಲರ ಯಜಮಾನರೇನು ಸರಿ

**ರಂಗಪ್ಪ**— ಹೆಸರಿಗೆ ಮಾತ್ರ ಯಜಮಾನರು ವಕೀಲರ ಅಪ್ಪಾ ಅನ್ನು ಬರದ ಮಾತ್ರ ನಮ್ಮದು

**ಚಂದ್ರು**— ಯಜಮಾನರೇ ಕಿರಿಯರಾದ ನಾವು ತಮ್ಮಂಥ ಹಿರಿಯರಿಗೆ ದೇವರೆಂದು ಕಾಣಬೇಕ ಯೇನು ಮಾಡುವದವೆ ಇಗಿನವರಿಗೆ ಬುದ್ಧಿ ಬಹಳ ಕಡಿಮೆ

**ರಂಗಪ್ಪಾ**— ಯಷ್ಟು ಬಲ್ಲವ ಆದೀದಪಾ ನೀನರ ಹೇಳಂತ ಇಲ್ಲಪಾ ತಮ್ಮಾ ವಕೀಲರಿಗೆ ಯೇನರ ದುಡ್ಡು ಕೊಡುದು ಇತ್ರೇ ಅವನ್ನ ನನ್ನ ಕೈಯ್ಯಾಗ ಕೊಟ್ಟು ಹೋಗು

**ಚಂದ್ರು**— ನಾವ ವಹಿಸಿದ ಕಾರ್ಯ ಪೂರ್ತಿಯ್ಯಾಗವೆ ಹಣಾ ಹೇಗೆ ಕೊಡಬೇಕು ಯಜಮಾನರೆ: ಇಶ್ವರಪ್ಪನು ಜೇಲುವಾಸಿಯಾದ ನಂತರ ಹಣಾ ಯಣಿಸುವದು

**ರಂಗಪ್ಪ**— (ಗಾಬರೆಯಿಂದ) ಹಾಂ ಯಾವ ಇಶ್ವರಪ್ಪನವರೋ

**ಚಂದ್ರು**— ಅವರೇ ಹೆಂಡತಿಯನ್ನು ಕೊಲೆ ಮಾಡಿದಂಥಾ ಶ್ರೀಮಂತ ಇಶ್ವರಪ್ಪನವರು

**ರಂಗಪ್ಪ—** ಯೇನು ಅವರ ಸಲುವಾಗಿ ಬಂದಿಯ್ಯಾ ನೀನು ಅವರ ಮಗನ ಗೆಳೆಯಾ ಅಲ್ಲಾ ನೀನು ಅವರ ಮನಿಯಲ್ಲಾ ಹಾಳ ಮಾಡಿದಿ ಅವರಿಗೆ ನೋಡಿವರ ಹುಚ್ಚ ಹಿಡದೈತಂತ ಇನ್ನೂ ಯೇನನ ಮಾಡಬೇಕಂತ ಮಾಡಿದಿ ತಡಿ ನಮ್ಮ ವಕೀಲಪ್ಪ ಬರ್ಲಿ ನಿನ್ನ ಜೇಲಿಗೆ ಹಾಕುಸುವಾಂಗ ಮಾಡತೀನಿ

**ಅಶೋಕ—** (ಪ್ರವೇಶಿಸಿ) ಓಹೋ ಚಂದ್ರು ಬಂದು ಬಹಳ ವ್ಯೇಳ ಯಾಯಿತೆ

**ಚಂದ್ರು—** ಆದೇನಿಲ್ಲಾ ಹದಿನೈದು ನಿಮಿಷವಾಯಿತು

**ಅಶೋಕ—** ಟಿ ಯೇನಾದರೂ ಬಂದಿತ್ತೋ ಅಪ್ಪಾ ಮನೆಗೆ ಬಂದವರ ಆಥರಾಥಿತ್ಯ ನಿಮಗೆ ತಿಳಿಸಿಕೊಡಬೇಕೇನು

**ಚಂದ್ರು—** ಹೋಗಲಿ ಬಿಡು ಅಶೋಕಾ ಬಾ ಹೀಗೆ ನಮ್ಮ ಕಾರ್ಯ ಯಲ್ಲಿಗೆ ಬಂದು ಮುಟ್ಟಿತು

**ಅಶೋಕ—** ಮೀರಾದೇವಿಯವರಿಗೆ ಯೇನೂ ಆಗಲರಿಯದು ಮತು ಈಶ್ವರಪ್ಪನವರಿಗೆ ಅಪರಾಧಿಗಳೆಂದು ತೀರ್ಮಾನಿಸಲು ಕಠಿಣ ಯೇಕಂದರೆ ಈಗ ಅವರಿಗೆ ಪೂರ್ತಿ ತಲೆ ಕೆಟ್ಟದೆ

**ಚಂದ್ರು—** ಕೊನೆಗೆ ಅವನು ಮನೆಗೆ ಬಾರದಂತೆ ಆದರೆ ಸಾಕು

**ಅಶೋಕ—** ಓಹೋ ಇಷ್ಟು ಮಾಡಲು ಮಾತ್ರ ಸಾಧ್ಯವಿದೆ

**ರಂಗಪ್ಪ—** ಯೇನಪಾ ಅಶೋಕಪ್ಪ ಈಶ್ವರಪ್ಪನವರಿಗೆ ಮನೀಗೆ ಬಾರ ದಂತೆ ಮಾಡುವಿಯಾ ಎನು ಮೊದಲ ಯಲ್ಲಿ ಇದ್ದಿ ಈಶ್ವರಪ್ಪನವರು ನಿನಗೆ ಯೇನ ಮಾಡಿದ್ರು ಯಾರಿಂದಾ ಇಂಥಾ ದೊಡ್ಡಸ್ತಿಕಿ ಪಡದಿ ಈ ಖಬರ ಐತೋ ಇಲ್ಲೋ

**ಅಶೋಕ—** ಅಪ್ಪಾ ನಮ್ಮಗಳ ಮಧ್ಯ ಬರಬೇಡಾ ಇದು ವಕೀಲ ವೃತ್ತ ನಿನಗೇನು ಗೊತ್ತು ಸುಮ್ಮನಿರು

**ರಂಗಪ್ಪ—** ಯಾವ ವೃತ್ತಿ ಆದರೇನೋ ಅಷ್ಟು ವುಪ್ಪು ಉಂಡವರದು ಖುಣಾ ನೆನಪಿರಬೇಕು ತಿಳೀತ ದೊಡ್ಡ ಸ್ಯಾಣೆ ಆಗಬೇಡಾ ಇಕಾ ವಕೀಲಾ ಈ ನ್ಯಾಯದಾಗ ನೀ ಕೈ ಹಾಕಿದಿ ಅಂದ್ರ ನಮಗ ನಿಮಗ ಕೆಟ್ಟ ಹೋಗುತ್ತ ಹುಷಾರಿ

**ಚಂದ್ರು**— ವಕೀಲರೆ ಈ ಹುಚ್ಚು ಕಲ್ಪನೆಗೆ ಕುಳಿತುಕೊಂಡರೆ ಬರುವ ಹತ್ತು ಸಾವಿರ ರುಪಾಯಿಕೊಡುವವರಾರು ವಿಚಾರಮಾಡಿ ನೋಡು ನೀನೇನು ಅಜ್ಞಾನಿಯಲ್ಲಾ

**ರಂಗಪ್ಪ**— ಪಾಪಕ್ಕ ಯೇಟದುಡ್ಡ ಆದ್ರೇನೋ

**ಚಂದ್ರು**— ನೋಡು ಅಶೋಕಾ ನಿಮ್ಮ ತಂದೆಯವರ ಮಾತಿಗೆ ಮರುಳಾಗಿ ಕುಳಿತರೆ ಮನೆಗೆ ಬಂದಭಾಗ್ಯ ಲಕ್ಷ್ಮಿಯನ್ನು ಕಾಲಿನಿಂದ ವದೆದು ಹೊರದೂಡಿದಂತೆ ನೋಡು ಇನ್ನೂ ವಿಚಾರಿಸು ಮತ್ತೆ ನಾಳೆ ಭೆಟ್ಟಿಯಾಗುವೆ ( ಹೋಗುವನು )

**ರಂಗಪ್ಪ**— ಸ್ವಲ್ಪ ತಿಳಿದುನೋಡು ಅಶೋಕಾ ಈಶ್ವರಪ್ಪನವರು ತಮ್ಮ ಮಗನ ಸುಳ್ಳು ನೂಡಿ ನಿನ್ನನ್ನೇ ಹೊಟ್ಟೆಯ ಮಗನೆಂದು ತಿಳಕೊಂಡು ಬಂದಾರ ಈ ಉಡಾಳನ ಮಾತು ಕೇಳಿ ದುಡ್ಡಿನ ಮುಖನೋಡ ಬೇಡಾ ತಿಳಿತ

**ಅಶೋಕ**— ಈ ನಿಮ್ಮ ಹಿಂದಿನಕಾಲದ ಹಾಳುತತ್ವವನ್ನು ಕೊಚ್ಚಲು ನೀನೇನು ವೇದಾಂತ ತತ್ವಜ್ಞಾನಿಯಲ್ಲಾ ಈ ನಿಮ್ಮ ಜ್ಞಾನೋಪ ದೇಶದಿಂದ ನಡದೇ ನನ್ನ ವೃತ್ತಿಯಲ್ಲಿ ವಂದು ಕಾಸುಕೂಡಾ ಹುಟ್ಟದಂತೆ ಮಾಡಿದೆ ಧರ್ಮವಂತೆ, ಧರ್ಮ, ಬಡವರು, ಶ್ರೀಮಂತರು, ಬ್ರಾಹ್ಮಣರು ಜಂಗಮರೆಂದು, ನಿತ್ಯ ನೀವಿಬ್ಬರು ನನಗೆ ಪಾಠಕಲಿಸಲು ಮಹಾಪಂಡಿತರಾಗಿರುವಿರಿ, ಮತ್ತೆ ಅವಳಿರುವಳಲ್ಲಾ ನಿನ್ನ ಮನೆಯ ಸೊಸೆಯು ನನ್ನ ಪೂರ್ವ ಜನ್ಮದ ವಿಧಿಯು ವಕೀಲನೆನಿಸಿದ ನನಗೆ ಮನೆ ಭಾಡಿಗೆ ಕೊಡು ಎಷ್ಟು ಯೋಗ್ಯತೆಯು ಸಹಾ ಇಲ್ಲದಾಗಿದೆ ಇಂಥ ಪ್ರಸಂಗದಲ್ಲಿ ತಾನಾಗಿಯೇ ಬರುವ ಹತ್ತುಸಾವಿರ ರೂಪಾಯಿಗಳನ್ನು ಕಳೆದುಕೊಂಡು ಹುಚ್ಚನಾಗಲೇ, ಇಲ್ಲವೇ,ಧರ್ಮವಂತರಾಗಿಮೆರೆಯುವ ನಿಮ್ಮಿಬ್ಬರ ಮಾತು ಕೇಳಿ, ಬೀದಿಯ ಭಿಕಾರಿಯಾಗಲೇ,

**ರಂಗಪ್ಪ**— ತಿರಕೊಂಡ ತಿಂದರೂ ಚಿಂತೆಯಿಲ್ಲಾ ವಕೀಲ ಅದಿನಂತ ಮನಸಿಗೆ ಬಂದಾಂಗ ಮಾತಾಡ ಬ್ಯಾಡಾ ಪಾಪದ ಕೆಲ್ಸಕ್ಕ ಕೈ ಹಾಕೂದು ಬ್ಯಾಡಾ

**ಸುಶೀಲಾ**— ( ವಳಗಿಂದ ಬಂದು ) ಪತಿದೇವಾ ತಾವು ಮಾತಾಡಿದ್ದನ್ನು ಯಲ್ಲವನ್ನೂ ಕೇಳಿರುವೆ, ನಿಮ್ಮ ಮುಖದಿಂದ ಎಂಥ ಶಬ್ದಗಳು ಬಂದರೂ, ಅವೆಲ್ಲವೂ ಅಮೃತವಾಣಿಯೆಂದೆ ಅರಿತಿರುವೆ, ಆದರೆ, ತಂದೆಯಂತೆ

ವಿಧ್ಯಾ ಬುದ್ಧಿಗಳನ್ನು ನೀಡಿ ವಕೀಲರನ್ನಾಗಿ ಮಾಡಿ ಬಾಳಮಾರ್ಗಕ್ಕೆ ಹಚ್ಚಿದ ವರ ಕೊಲೆ ಮಾಡುವ ಪ್ರಯತ್ನ ಹುಡಿದ ನಿಮ್ಮ ಕಾರ್ಯ ಮಹಾಪಾಪ

**ಅಶೋಕ**— ಯೇ ಪಾಪ ಪುಣ್ಯದ ಪಶುಗಳೇ ಹೆಂಗಳೆಯಾಗಿ ನನಗೆ ಬುದ್ಧಿ ಹೇಳುವ ನೀನೆಸ್ಟರವಳು, ನಿಮ್ಮಿರ್ವರ ಮುಖವೇ ಬೇಡಾ ನನ್ನ ಮನೆ ಯಿಂದಾ ಇಂದೇ ಹೊರಟು ಹೋಗಿರಿ ಪಿಶಾಚಿಗಳೇ

**ಸುಶೀಲಾ**— ಪತಿದೇವಾ ತವರ ಮನೆಯನ್ನು ತೆರೆದು ಗಂಡನ ಮನೆ ಯಲ್ಲಿ ಅತ್ತೆ ಮಾವಂದಿರ ಸೇವಾ ಮಾಡುತ್ತ ಪತಿ ಅಜ್ಞಯೇ ಪರಶಿವನ ಆಜ್ಞಯಂದರಿತು, ನೀತಿ ಧರ್ಮಸಾರದಿಂದ ನಡೆಯುವದೇ ನನ್ನ ಮುಖ್ಯ ಕರ್ತವ್ಯ ಪತಿದೇವಾ ಇಂದೇಕೆ ಹೀಗೆ ಬಿರನುಡಿಗಳನ್ನಾಡಿ ಹೊರನೂಕುವಿರಿ ನನ್ನ ಅಪರಾಧವಾದರೂ ಯೇನಿದೆ ನೀವೆ ಹೇಳಿ

**ಅಶೋಕ**— ಸುಶೀಲಾ ನಾನು ಮಾಡ್ವಯಾವತ್ತೂ ಕಾರ್ಯಗಳಿಗೆ ವಿಘ್ನವನ್ನೊಡ್ಡಿ ನನ್ನಂಥವನಿಗೆ ಬುದ್ಧಿ ಹೇಳಲು ಬಂದಿರುವಿರಿ ನನಗೆ ಪಾಪ ಬಂದರೂ ಯಾರೇನು ಅಂದರೂ ಅಷ್ಟೇ ನೀವು ಮಾತ್ರ ಬೇಗ ಈ ಮನಿಯಿಂದಾ ತೊಲಗಿರಿ ಇಲ್ಲವಾದರೆ ನಾನೇ ಹೊರದೂಡುವೆನು ಎಚ್ಚರ

**ರಂಗಪ್ಪ**— ಯಚ್ಚರದಿವಪಾ ಯಚ್ಚರದೀವಿ ಮಗಾ ಶ್ಯಾಣೆ ಆಗಲಿ ಅಂತಾ ಇದ್ದ ಹೊಲ ಮನಿಮಾರಿದೆ ಇಗ ಅದರ ವುಪಕಾರಕ ತಿರಕೊಳ್ಳಾಕ ಕಳಸದೇನ ಮಾಡಿಪಾ ಇದಕ ದೇವರು ತಕ್ಕ ಶಾಸನಾಮಾಡದಾಕಿಲ್ಲಾ ಹೋಗಂದ ಹೊಂಟೆ ಅದರ ಕೈ ಹಿಡಿದ ಹೆಂಡತಿಯ್ಯಾಕ ಹೋಕ್ಕಾಳೋ ವಕೀ ಲಪ್ಪಾ

**ಅಶೋಕ**— ಇವಳು ಮಾತ್ರ ಮೊದಲು ಹೊರಬೀಳಬೇಕು. ತಂಗಿಯ ಮಗಳೆಂದು ವಶ್ತಾಯದಿಂದ ಮದುವೆ ಮಾಡಿದ ಈ ಅರಿಷ್ಠಳನ್ನು ಮೊದಲು ಕರೆದುಕೊಂಡು ಹೊರಬೀಳು ಇಲ್ಲವಾದರೆ ಕತ್ತುಹಿಡಿದು ಇರ್ವರನ್ನು ದಬ್ಬುವೆ ಜೋಕೆ

**ಸುಶೀಲಾ**— ಸ್ವಾಮಿ ಹೀಗೇಕೆ ಮಾತನಾಡುವಿರಿ ಕೈ ಹಿಡಿದ ಪತಿ ಯಿಂದ ದೂರಾಗದೆ ಯಂಥ ದುರ್ಧರ ಪ್ರಸಂಗ ಬಂದರೂ ದೇವರ ಮೇಲೆ ಭಾರಹಾಕಿ ನಿಮ್ಮನ್ನೇ ಹಿಂಬಾಲಿಸುವೆ ನೀವೇ ನನ್ನ ಮುಕ್ತಿ ಮಾರ್ಗದದೊರಿ

**ರಂಗಪ್ಪ—** ನೋಡು ಅಶೋಕಪ್ಪಾ ಸುಶೀಲವ್ವನ ಮುಖಾ ನೋಡು ತುಂಬ ಹೊಟ್ಟಿಲೆ ಇದ್ದ ಈ ತಾಯಿಯನ್ನು ಹೊರಗೆ ಹಾಕಿದರೆ ಜನರು ನೀನಗ ಯೇನಂದಾರು ತಿಳಿದನೋಡು

**ಅಶೋಕ—** ಯೇನಾದರೂ ಅನ್ನಲಿ ನನ್ನ ಮನಾ ನನ್ನ ಧನಾ ನನ್ನ ಮನೆ ನನ್ನ ಮನ ಬಂದಂತೆ ಮಾಡುವೆ ಹುಂ ಹೊರಟು ಹೋಗಿರಿ

**ಸುಶೀಲಾ—** ( ಪಾದವನ್ನು ಹಿಡಿದು ) ಸ್ವಾಮಿ ನಿರ್ವೇನು ಮಾಡಿದರೂ ನಾನೀಪಾದವನ್ನು ಬಿಟ್ಟು ದೂರಿರಲಾರೆ ಪತಿಯೇ ಸತಿಗೆ ಸರ್ವಸ್ವ ಪತಿಯಿಂದಲೇ ಸತಿಗೆ ಮುಕ್ತಿ ತಾವು ಹೊಡೆದರೂ ನೂಕೆದರೂ ಹೆಚ್ಚೇಕೆ ನನ್ನ ಪ್ರಾಣ ತೆಗೆದು ಕೊಂಡರೂ ನಾನು ಮಾತ್ರ ತಮ್ಮ ಪಾದವನ್ನು ಬಿಡಲಾರೆ ಯೇಕೆ ನಮ್ಮಿಂದಾಂವ ಅಪರಾಧವಾಗಿದೆ

**ಅಶೋಕ—** ಸುಶೀಲಾ ನಿಮ್ಮ ಮಾತು ಕೇಳಲು ಸಹ ಸಹನೆ ನನಲ್ಲಿ ವುಳಿದಿಲ್ಲಾ ಹುಂ ಮೊದಲು ಹೊರಬಿಳು ( ಸುಸೀಲೆಗೆ ನುಗುಸುವನು

**ಸುಶೀಲಾ—** ಸ್ವಾಮಿ ಸ್ವಾಮಿ ನಿಮ್ಮನ್ನಗಲಿ ಜಯಿಸಲಾರೆ ಕೈ ಬಿಡಬೇಡ್ರಿ

ಸುಸೀಲೆಯು ಅಳುತ್ತಾ ಪಾದಹಿಡಿಯುವಳು ಅಶೋಕನು ಕೈ ಹಿಡಿದು ಜಗ್ಗಿ ಹೊರಗೆ ಹಾಕಲು ಹೋಗುವನು

**ರಂಗಪ್ಪ—** ಯೇ ಯೇ ಕೈ ಬಿಡೋ ಮೊದಲು ಹೇಣ್ತಿ ಅನ್ನದು ಮರತಂಗ ಕಾಣತೈತಿ ನಿನಗೇನ ಕೆಡಗಾಲನ ಬಂದೈತಿ ನನ್ನ ಸೊಸೆಗೆ ತಿರಕೊಂಡ ತಂದ ಹಾಕತೀನಿ ದೇವರ ಇದ್ದದ್ದ ಕರೇ ಆದ್ರ ನೀ ಮಾಡು ಪಾಪಕ್ಕೆ ದೇವರು ನಿನಗ ಬುದ್ಧಿ ಕಲಸಪ ಇರಾಕಿಲ್ಲ (ಸುಸೀಲವ್ವನ ಯಬ್ಬಿಸುತ್ತ) ಯೇಳುತಾಯಿ ಸುಸಿಲವ್ವಾ ಯಲ್ಲಿಯಾದರೂ ಹೋಗಿ ಹೊಟ್ಟೆತುಂಬಿ ಸಿಕ್ಕೊಳ್ಳುವಾ ನಡೆತಾಯಿ ( ಇಬ್ಬರು ಹೋಗುವರು )

**ಅಶೋಕ—** ಸಾಕು ಸಾಕಾಗಿ ಹೋಯಿತು ಈ ಪ್ರಪಂಚಾ

ಪ್ರವೇಶ ರಸ್ತಾ

ಸುಸೀಲಾ ರಂಗಪ್ಪಾ ದುಃಖಿಸುತ್ತ ಬರುವರು

**ಸುಶೀಲಾ ಪದಾ**

**ರಾಗ ಚಾಂದ**

ವಿಧಿ ನಿನ್ನ ಆಟ ವಿಧಿ ನಿನ್ನ ಆಟ ಸಾಕು ಸಾಕು ।
ಈ ನನ್ನ ಜೀವಾ ನೂಕುವೆ ಭವಾ ॥
ನೂಕು ನೂಕು ಈ ಭವವನ್ನು ।
ಇಪರಿಂದಲಿ ಬಳಲಿಸುವದಿನ್ನು
ಸಾಕು ಸಾಕು ಈ ನನ್ನ ಜೀವಾ
ನುಕುವೆ ಭವಾ ॥

(ಸುಸೀಲಾ ರಂಗಪ್ಪಾ ದು:ಖಿಸುತ್ತ
ಮುಂದಕ್ಕೆ ಹೋಗುವರು
ಅದೇ ರಸ್ತಾದಲ್ಲಿ ಚಂದ್ರುವಿನ ಪ್ರವೇಶ)

**ಚಂದ್ರು**— ಸುಸೀಲೆ ಯನ್ನ ಹೃದಯದಲ್ಲಿ ಕಾಮೋತ್ಪತ್ತಿಯನ್ನು ಯಬ್ಬಿಸಿರುವ ಸುಸೀಲೆ ನಿನ್ನನ್ನು ಆ ವಕೀಲನು ಹೊರಗೆ ಹಾಕಿ ಯನ್ನ ಸ್ವಪ್ನ ದಲ್ಲಿಯ ಸುಖಕ್ಕೆ ದಾರಿ ಮಾಡಿಕೊಟ್ಟನು ಇನ್ನು ಮಾತ್ರ ನಿನ್ನಂಬಿಡದೇ ಬೆನ್ನಟ್ಟಿ ಸಮಯ ಸಾಧಿಸಿ ಮನದ ರಾಣಿಯನ್ನಾಗಿ ಮಾಡಿಕೊಳ್ಳುವೆ ನಿನ್ನ ಮೇಲೆ ಕಂಣಿಟ್ಟು ನಾನು ಅಶೋಕನ ನೆವ ಮಾಡಿ ನಿನ್ನಲ್ಲಿಗೆ ಬಂದಿದ್ದೆ ಆವಾಗ್ಯ ಬಿರನುಡಿಯಿಂದಾ ದೂರೀ ಕರಿಸಿರುವೆ ಅಂದಿನಾಕನಸು ಇಂದು ನನಸಾಗುವಂತೆ ಮಾಡುವೆಬೀರುವಿಯಂತೆ ನಿನ್ನ ಡಂಬಾಚಾರದ ನುಡಿಗಳನ್ನು (ಮುಂದಕ್ಕೆ ನೋಡಿ ಇದೇನು ಯಷ್ಟು ದುರುಹೋದರಲ್ಲಾ ಹೋಗಲಿ ಇವರನ್ನು ಬಿಡದೆ ಹಿಂಬಾಲಿಸಿ ನನ್ನ ಕಾರ್ಯ ಇಡೇರಿಸಿಕೊಳ್ಳುವೆ

(ನಗುತ್ತಾ ಮುಂದಕ್ಕೆ ಹೋಗುವನು)

## ೧೫ ನೇ ಪ್ರವೇಶ ಜಂಗಲಿ

**ಸುಶೀಲಾ ಪದಾ** ಅನ್ನುತ್ತ ಬರುವಳು
ರಂಗಪ್ಪನು ಅವಳ ಹಿಂದೆ ಬರುವನು

**ಸುಶೀಲಾನ ಪದಾ**

**ಸುಶೀಲಾ**— ಮಾವಾ ಇನ್ನು ಯಷ್ಟು ದೂರ ಹೋಗಬೇಕು ಯಲ್ಲಿ ವಾಸಿಸಬೇಕು

**ರಂಗಪ್ಪ**— ಸುಸೀಲವ್ವಾ ನಾವು ಯಲ್ಲಿ ಯಿರಬೇಕೋ ನನಗ ತಿಳಿವಲ್ಲ ದವ್ವಾ ಯಾಕಂದರ ನೀನು ತುಂಬಿದ ಹೆಣವುಗಳು ದೇವರ ನಮುಗ ಯಂಥಾ ವ್ಯಾಳ್ಯವು ತಂದ ನಮ್ಮ ಈ ಕಷ್ಟಾ ಅವನ ಪರಿಹರಿಸಿ ನಮುಗ ದಾರಿ ಮಾಡಿ ಕೊಡಬೇಕವ್ಮಾ ತಾಯಿ

**ಸುಶೀಲಾ**— ಮಾವನರೇ ಸಕಲ ಚರಾಚರ ಪ್ರಾಣಿಗಳನ್ನು ರಕ್ಷಣೆ ಮಾಡುವ ಭಗವಂತನೇ ಕಾಯಬೇಕಲ್ಲದೆ ಅನ್ಯರಿಂದ ಅಸಾಧ್ಯ ಮಾವಾ

**ರಂಗಪ್ಪ**— ಸುಶೀಲವ್ವಾ ಇನ್ನು ಸ್ವಲ್ಪನಿದಾನ ಮಾಡವ್ವಾ ಮುಂದಕ್ಕ ಹೋಗುದ್ರಾಗ ಕತ್ತಲ ಆಗಕೈತಿ ನೀ ನೋಡಿದ್ರತುಂಬಾ ಹಡಿಲ್ಯಾಗಿದಿ ದಾರ್‍ಯಾಗ ಕಲ್ಲು ಮುಳ್ಳು ತುಳಕೊಂತ ಹ್ಯಾಂಗ ಹೋಗುದು

**ಸುಶೀಲಾ**— ಮಾಮಾ ಸಾಗಿ ಸಂಸಾರವೆಂಬ ರಥಕ್ಕೆ ಸತಿಪತಿಗಳೆಂಬೆ ರಡು ಗಾಲಿಗಳು ಸುಸುತ್ರವಾಗಿಸಾಗಿಮುಕ್ತಿ ಸೋಪಾನದಮಾರ್ಗಹಿಡದಿರುವಾಗ ಯಾವ ಅಘಾತದ ವಜ್ರಾ ಘಾತ ನಮುಗೆ ಬಡದಿಹದೋ ಆಪರ ಶಿವನೇ ಬಲ್ಲಾ ಇಂಥ ಸಮಯದಲ್ಲಿ ಕತ್ತಲೆ ಭೀತಿನನಗಿಲ್ಲಾ ಮಾಮಾ ಯಾವಾಸೆಗಾಗಿ ನಾನು ಬದುಕಬೇಕು ದೇವಾ ದಯಾಸಾಗರಾ ಬೇಗನೆ ನಿನ್ನ ಸಾನದ್ಯದಲ್ಲಿ ನನ್ನನ್ನು ಕರೆದುಕೋ

**ರಂಗಪ್ಪ**— ಸುಶೀಲವ್ವಾ ಯಂಥಾ ಕಷ್ಟ ಬಂತವಾ ಮುಂದರ ಹೋದರ ಅಲ್ಲೇನರ ಗುಡಿಗುಂಡಾರ ಅದಾವ ಹ್ಯಾಂಗ ನೋಡುನು ಹ್ಯಾಂಗರ ಮಾಡಿ ಧೈರ್ಯ ಮಾಡ ತಾಯಿ

**ಸುಶಿಲಾ**— ಮಾ ಮಾ ಪತಿಯಾಜ್ಞಯೇ ಪರಶಿವನ ಆಜ್ಞಯಂದರಿತು ಕಾಲ ನೂಕುವ ಈ ಮಾನಿನಿಗೆ ಯಂಥ ದುರ್ಗಟ ಪ್ರಸಂಗ ಬಂದರೂ ಅದನ್ನು ದಾಟಿಧಡಕ್ಕೆ ಮುಟ್ಟುವಾ ಮಾಮಾ ಈ ನಿನ್ನ ಸೊಸೆಯು ಆತ್ಮದಲ್ಲಿ ಪತಿಯೇ ಪರೊನ್ಮುಕ್ತಿಯಂಬ ವುಜ್ವಲ ಕಿರಣಗಳಿಂದ ಸಾಗಿರುವದೆನ್ನಬಾಳು ಆದರೆ ಇಂಥ ಗೋಳು ನನ್ನನ್ನೇನು ಮಾಡುವವು ಸತ್ಯಶೀಲತೆವಂದಿದ್ದರೆ ಸಾಕು ಅಪ್ಪಾ ಯೇಕೋ ನನಗೆ ಬಾಯ್ಯಾರಿ ಸಂಕಟವಾಗಹತ್ತಿದೆ ಸ್ವಲ್ಪ ಇಲ್ಲಿ ಎಲ್ಲಿಯಾದರೂ ನೀರು ಸಿಕ್ಕರೆ ನನ್ನ ಒಡಲು ಶ್ಯಾಂತವಾಗುವದು ಮಾ ಮಾ

**ರಂಗಪ್ಪ**— ಸುಶೀಲವ್ಮಾ ಯಂಥಾ ತಿಳವಳ್ಕಿಯ ಮಾತಾಡುವಿ ಯವ್ಮಾ ನನ್ನ ಮಗನು ನಿನ್ನನ್ನು ಹೊರಗೆ ಹಾಕಿದರೂ ನೀನಿಷ್ಟು ಕಷ್ಟಪಟ್ಟರೂ

ಗಂಡನೇ ದೇವರೆಂಬ ಆತನನ್ನು ಧ್ಯಾನಿಸುವಿ ನಿನ್ನಂಥಾ ತಾಯಿ ನಮಗ ಸೊಸಿ ಆದದ್ದೂ ಪುಣ್ಯತಾಯಿ ಅಮ್ಮಾ ಸುಶೀಲಮ್ಮಾ ಇಲ್ಲಿ ಕಾಣುವಗಿಡದ ನೆರಳಿಗೆ ಕೊಡ್ರು ನಾನು ಇಲ್ಲಿ ಯಲ್ಲಿಯಾದರೂ ನೀರು ಹುಡಿಕಿ ತರುವೆತಾಯಿ

ಸುಶಿಲವ್ವನನ್ನು ಗಿಡದ ನೆರಳಿಗೆ ಕೂಡ್ರಿಸಿ ರಂಗಪ್ಪನು
ನೀರು ಹುಡುಕುವದಕ್ಕೆ ಹೋಗುವನು

**ಸುಶೀಲಾ**— (ಅಳುತ್ತಾ) ದೇವ ದೇವನಾದ ಪರಮೇಶ್ವರ ಈ ಹೆಂಣು ಬಾಲೆಯನ್ನು ಈ ಘೋರಾಂಧಕಾರವಾದ ಕಾನನದಲ್ಲಿ ಬಿಟ್ಟು ಯನ್ನ ವಡಲ ತೃಷೆ ನೀಗಿಸುವದಕ್ಕೆ ಗಂಗಾ ಮಾತೆಯನ್ನು ಹುಡಕುತ್ತಾ ತಂದೆಯಂತಿರುವ ನನ್ನ ಮಾವನು ಹೋದನು ಆತನು ಬರುವವರೆಗೂ ಯೇಕಾಂಗಿಯಾಗಿ ಕಾಲ ಕಳೆಯುವೆ ಯನ್ನ ವಡಲತಾವ ನೀಗ್ಸಿ ನಮ್ಮನ್ನು ಕಾಯುವ ಭಾರ ನಿನ್ನದಲ್ಲದೆ ಅನ್ಯರದಲ್ಲಾ ಯಲ್ಲವೂ ನಿನ್ನ ಇಚ್ಛೆ (ಅಳುತ್ತಾ ಮಲಗುವಳು)

**ಚಂದ್ರು**— (ಪ್ರವೇಶಿಸಿ ಅತ್ತಿತ್ತ ನೋಡಿ) (ಸ್ವಗತ) ವಳ್ಳೇ ಸಮಯ ಈ ಸುಸೀಲೆಯನ್ನು ಬಿಟ್ಟು ಆ ರಂಗನ್ಯುಯಲ್ಲಿಯ್ಯೋ ಹೋಗಿರುವನಲ್ಲಾ ಇದೇ ಸಮಯ ನನ್ನ ಕಾರ್ಯ ಸಾಧಿಸಿಕೊಳ್ಳುವೆ (ಪ್ರಕಟ) ಆಹಹಾ ನಿದ್ರಾ ದೇವಿಯ ತೊಡೆಯ ಮೇಲೆ ನಿದ್ರಿಸುತ್ತಿರುವಳು ಈ ಸುಸೀಲೆ ನಾನೀಗ ಸದ್ದು ಮಾಡಿದರೆ ಸಿಗಲಾರಮ ಇವಳು ಸುಂದರ ಮುಖದ ಮುದ್ದು (ಮೆಲ್ಲಗೆ ಹೋಗಿ ಕೆ ಮುಂದೆ ಮಾಡುವನು )

**ಸುಶೀಲಾ**— ಸರಿ ದೂರಾಗು ಯಾರು ನೀನು (ನೋಡಿ ಛಂದ್ರಶೇಖ ರಂಣಾ ಇದೇನು ನಡತೆ ತಂಗಿಯಂದರಿಯವೆ ನನ್ನ ಮುಟ್ಟಲು ಬಂದ ಈ ನಿನ್ನ ಕರಗಳು ಕಳಚಿ ಬೀಳುವವು ಭೂಮಿಗೆ ಇದನ್ನರಿತು ನನ್ನ ಮರೆತು ಹೊರಟು ಹೋಗು ಇಲ್ಲಿಂದಾ

**ಚಂದ್ರು**— ಸುಸೀಲೆ ಅಂಣನೆಂಬ ಮನಭೇದಕ ನುಡಿಗಳನ್ನಾಡದಿರು ನನ್ನ ನುಡಿಯನ್ನು ಕೇಳು ನಿನ್ನಂಥಾ ಸುಂದರವತಿಯನ್ನು ಕೂಡಿಕೊಳ ಬೇಕೆಂದೇ ಇಲ್ಲಿಗೆ ಬಂದಿರುವೆ ನೀನು ಮಾತಿನ ಮಾಲೆಯನ್ನು ಹೆಣೆಯುತ್ತಾ ಹೊತ್ತುಗಳಿಯ ಬೇಡಾ ಸುಮ್ಮನೇ ಬಂದು ಬಿಡು ಯೇನು ತೊಂದರೆ ಬಂದರೂ ನಾ ನೋಡುವೆ

**ಸುಶೀಲಾ**— ಅಂಣ ಈ ನಿಸ್ಸ್ ತಂಗಿಗೆ ಯಾವ ಕಾಲಕ್ಕೂ ದುಃಖ ಪರಂಪರೆಯಿಲ್ಲಾ ಈ ಸಮಯಕ್ಕೆ ನೀವು ಯೇನು ಹೇಳಿದರೂ ಯನ್ನ ಆತ್ಮ ವಲಿಯುವದಿಲ್ಲಾ ಮತ್ತು ಈ ಮರದಡಿಯನ್ನು ಬಿಟ್ಟು ನಂದಡಿ ಕದಲಿಸುವ ದಿಲ್ಲಾ ನೀನು ವಕೀಲರ ನಂಬಿಗಸ್ಥ ಸ್ನೇಹಿತನಿದ್ದು ಇಂಥಾ ಮೋಸದ ನೀಚ ಕೃತಿಯನ್ನಾಚರಿಸಲು ಆತುರ ಪಡಬೇಡಾ ನಾನು ನಿನ್ನ ತಂಗಿ ಅಲ್ಲವೇ

**ಚಂದ್ರು**— ಸುಶೀಲೆ ಇಷ್ಟೊಂದು ವೇದೋಕ್ತಿಯ ಮಾತುಗಳನ್ನು ವತ್ತಿ ಹೇಳುವ ಅವಶ್ಯ ಕತೆಯಿಲ್ಲಾ ಈ ಜೀವನ ಜಗವನ್ನು ಬಿಟ್ಟು ಹೋಗುವ ದರೊಳಗಾಗಿಯೇ ನಿಮ್ಮಂಥಾ ರೂಪವತಿಯರನ್ನು ಮೋಹಿಸುವದೇ ಸುಖದೂರಿ ಕರಿಸುವದೇ ದುಃಖ ಇದನ್ನರಿತು ಬೇಗ ಬಂದು ಬಿಡು ಇಲ್ಲವಾದರೆ ಬಲಾ ತ್ಕಾರಕ್ಕೆ ವಳಗಾಗುತಿ ಜೋಕೆ

**ಸುಶೀಲಾ**— ಅಂಣಾ ನಾನು ಪತಿಯಿಂದಾ ತೊರೆದ ವಳಾಗಿರುವೆ ನೆಂದು ಹೀಗೆ ಮಾತಾಡಬೇಡಾ ಈ ಮಾನಿನಿಯ ರೂಪವು ನಿನಗೆ ಸುಖರೂಪ ವೆಂದು ತಿಳಿಯಬೇಡ ಸಾವಿನರೂಪವೆಂದು ತಿಳಿ ಅಂಣಾ ಅಂಣಾ ಯಂದು ಬೇಡಿ ಕೊಳ್ಳುವ ಸ್ತ್ರೀಯರ ಮೇಲೆ ಕಂಣಿಟ್ಟು ಕೈ ಮಾಡಿದಿಯಾದರೆ ಅಂಥ ಸ್ತ್ರೀಯರ ಕಾಂತಿಯಿಂದ ಯೇಳುವ ಕೆಂಡವು ನಿನ್ನನು ಸುಟ್ಟು ಭಸ್ಮೀಕೃತವನ್ನಾಗಿ ಮಾಡು ವದು ಇದನ್ನರಿತು ಸುಮ್ಮನೆ ಇಲ್ಲಿಂದಾ ಹೊರಟು ಹೋಗು

**ಚಂದ್ರು**— ಸುಸೀಲೆ ನೀನೆಷ್ಟು ಹಲಬಿ ಅಂಗಲಾಚಿ ಬೇಡಿಕೊಂಡರೂ ನಿನ್ನಿಂದ ದೂರಾಗಿ ಹೋಗುವ ಆಶೆ ನನಗಿಲ್ಲಾ ನಿನ್ನನು ಮುಟ್ಟಿ ಭಸ್ಮವಾದರೂ ಅದನ್ನುಕೇಳುವವರ್ಯಾರು ಇರುವದಿಲ್ಲಾ ಕೇಳಿದರೂ ನನ್ನ ಯಾವ ಕಾರ್ಯಕ್ಕೂ ಅಡ್ಡಿ ಆತಂಕಗಳಿಲ್ಲಾ ಸುಮ್ಮನೇ ಬಂದು ಬಿಡು ಇಲ್ಲವಾದರೆ ಸಾಧಿಸಿಕೊಳ್ಳುವೆ ನನ್ನ ಕಾರ್ಯ (ಕೈ ಹಿಡಿಯಲು ಹೋಗುವನು)

**ಸುಶೀಲಾ**— ಥೂ ಕಾಮಾಂಧನಾದ ಪಾಪಿ ಸರಿ ಆಚಗೆ ನನ್ನನ್ನು ಮುಟ್ಟಿದಿಯಾದರೆ ಘೋರ ಪರಿತಾಪಕ್ಕೆ ಇಡಾಗುವಿ ಕಾಮುಕಾ ಪತಿವೃತೆಯರ ಪವಿತ್ರ ಬೆಳಕು ನಿನ್ನಂಥಾ ಕಾಮುಕನಿಗೆ ಕಾಣಲಾರವು ಸೀತಾ ಮಾತೆಯನ್ನು ಕೆಣಕಿ ಮದಾಂಧನಾದ ರಾವಣನು ಹೇಗಾದನು ಮಾತಾ ದ್ರೌಪದಿಯನ್ನು ಮುಟ್ಟಹೋದ ಕೀಚಕನು ಹೇಗೆ ಪ್ರಾಣ ಕಳೆದುಕೊಂಡನು ಇದು ತಿಳಿದು ಕಾಮದಾಶಯ ಕಳೆದು ಹೊರಟು ಹೋಗು ಇಲ್ಲಿಂದಾ ಪಾಪಿ!

**ಚಂದ್ರು**— (ಯೇರಿ ಹೋಗಿ) ವಾ ಹೆಂಣೆ ವಳ್ಳೇ ಚಮತ್ಕೃತಿಯ ಮಾತುಗಳನ್ನಾಡುವಿಯಲ್ಲಾ. ನಿನ್ನಂಥಾ ಹೆಂಗಳೆಯ ನುಡಿಗಳಿಗೆ ಬೆರಗಾಗುವ ಪೊಳ್ಳು ಹೃದಯದ ಚಂದ್ರಶೇಖರನಲ್ಲಾ. ನಾನು ಬಹುದಿನಗಳಿಂದಲೂ ಬಯ್ಸಿ ಬಂದ ಆಶೆಯಿಂದೇ ಇಡೇರಿಸಿಕೊಳ್ಳುವೆ. (ಬಲಾತ್ಕರಿಸುವನು)

**ಸುಶೀಲಾ**— ಹಾಯ್, ಮಾವಾ ರಕ್ಷಿಸು [ಚಿರುತ್ತ ಬೀಳುವಳು. [ಚಂದ್ರು ಯಳಿಯಲಿಕ್ಕೆ ಹೋಗುವನು ರಂಗಪ್ಪನು ಬಂದು ಬಡಗಿಯಿಂದಾ ಹೊಡೆಯುವನು. ಚಂದ್ರು ಮೂರ್ಛೆ ಹೋಗುವನು]

**ರಂಗಪ್ಪ**— (ಸೊಸಿಯನ್ನು ಯಬ್ಬಿಸುತ್ತಾ) ಯೇಳು ತಾಯಿ ಯೇಳು ಅಶೋಕನು ಹೊರಗೆ ಹಾಕಿದ್ದರಿಂದಲೇ ಇಂಥ ಕಷ್ಟಕ್ಕೆ ಗುರಿಯಾಗಿರುವೆವು. ನಿನಗೆ ಮುಟ್ಟಲೂ ಬಂದವನ ಗತಿಯೇನಾಗಿದೆ ನೋಡು ತಾಯಿ. ಸುಶೀಲವ್ವಾ ಯಿಂಥಾ ಕಾಲ ತಮ್ಮ ಗೆಳೆಯರ ಹೆಂಡಿರನ್ನು ಮುಟ್ಟಲು ಹೇಸರು ಈಗಿನ ಜನಾ. ನಿನ್ನಂಥಾ ಸಾಧ್ವಿಯವೇಲೆ ಯಾರು ಯೇನು ಮಾಡಿದರೂ ಅದು ನಡೆಯದು. ಬೇಗನೇ ಇಲ್ಲಿಂದಾ ಹೋಗಿ ಯಲ್ಲಿಯಾದರೂ ವಸ್ತಿಮಾಡುವಾ ನಡಿಯಮ್ಮಾ.

**ಸುಶೀಲಾ**— ಮಾವಾ, ಯನ್ನ ಮಾನರಕ್ಷಣೆಮಾಡಿದ ನೀನು ನಿಜವಾಗಿಯೂ ಆ ಪರಮಾತ್ಮನೇ ನಿಜಾ. ನಡೆಮಾವಾ ನೀ ಹೇಳಿದಂತೆ ನಡೆದುಕೊಂಟು ಮುಕ್ತಿಮಾರ್ಗವ ಪಡೆಯುವಾ.
(ರಂಗಪ್ಪನು ಸೊಸೆಯನ್ನು ಕರೆದುಕೊಂಡುಹೋಗುವನು. ಚಂದ್ರು ಮೂರ್ಛೆಯಿಂದೆದ್ದು.)

**ಚಂದ್ರು**— (ಅತ್ತಿತ್ತ ನೋಡಿ) ಯೇನು ಹೊರಟುಹೋದಳೇ ಆ ಸುಶೀಲೆ ಹೋಗಲಿ, ಮತ್ತೊಂದು ಸಮಯ ಸಾಧಿಸಿ ಅಪಮಾನದ ಪ್ರತಿಫಲ ಪಡಿಯದೇ ಹೋದರೆ ನಾನು ಚಂಪ್ರಶೇಖರನೇ ಅಲ್ಲಾ. (ಹೋಗುವನು)

**ಈಶ್ವರಪ್ಪ**— ಮಕ್ಕಳೆಂಬ ಮೋಹಮಾಯ ಮೃಗಜಲ. ಸ್ವಾರ್ಥಕ್ಕಾಗಿ ಬಲಿತಗೆದುಕೊಳ್ಳುವದೊಂದು ಕಟುಕಕುಲಾ. ಗೌರಾ, ಮೇಲೆ ನಿಂತು ನಿನ್ನ ಪತಿಯನ್ನು ನೋಡಿ ನಗುವಿಯಾ, ಕೊಡಲಿಕಾವು ಗಿಡಕ್ಕೆ ಮೃತ್ಯುವೆಂದು ನಗುವಿಯಾ. ಗೌರಾ, ಮೂವತ್ತು ವರ್ಷ ಜತೆಯಾಗಿ ಪ್ರೀತಿಯಲೆ, ಅತಿಯಾಗಿ

ಆನಂದೆಯುತ್ತಾಗಿ ನನ್ನನು ಅಗಲಿ ದೂರನಿಂತು ಕೈಮಾಡಿ ಕರೆಯುವಿಯಾ. ಬರುವೇ ಗೌರಾ ನೀನಿಲ್ಲಿದ ಬಾಳು ಬರಿದು. ಈ ಜಗ ಸುಳ್ಳು, ಮಗಾ ಸುಳ್ಳು, ನಾ ಗಳಿಸಿದ ಆಸ್ತಿಪಾಸ್ತಿಗಳು ಸುಳ್ಳು ನೀನೊಂದೇ ನಿಜವಸ್ತು. ನಾನೇನೀನು ನೀನೇನಾನೆಂದು ಬೆರೆದ ಆತ್ಮವೇ ಜೀವನದ ಜೀವಾಳ ಗೌರಾ. ಬಂದೆ ಗೌರಾ ಬಂದೆ.

## ೧೬ನೇ ಪ್ರವೇಶ

ಚಂದ್ರು ವಿಚಾರವಲ್ಲಿ ತಿರಗುತ್ತ

**ಚಂದ್ರು**— ಆಹಾಹಾ! ಸುಶೀಲಾ, ಯೇನವಳ ರೂಪಾ, ಯೇನವಳ ಲಾವಣ್ಯ, ಯಂಥ ಮುದ್ದು ಮುಖಾ, ಯುಂಥಾ ಸೌಂದರ್ಯ, ಅವಳ ಅಂಗ ಸುಖ ಬಯಸುವವರೆಗೂ ನನಗೆ ನೆಮ್ಮದಿಯೇ ಇಲ್ಲಾ ನಿನ್ನಿನ ಘಟನೆಯಲ್ಲಿ ನಿರಾಶನಾಗಿ ಓಡಿಬಂದೆ ಆ ಬಡ್ಡಿಯ ಮಗನೊಬ್ಬ ರಂಗನು ನಮ್ಮ ಕಾರ್ಯಕ್ಕೆ ಅಡ್ಡಿಯಾಗಿಹನು. ಇರಲಿ ಮತ್ತೊಂದು ಸಮಯಕ್ಕೆ ಆ ಸುಶೀಲೆಯನ್ನು ತಂದಾದರೂ ಈ ಮನೆಯ ರಾಣಿಯನ್ನಾಗಿ ಮಾಡುವೆ. ಅಲ್ಲಿಯ ವರೆಗೂ ಶಾಂತಿಯೇ ಇಲ್ಲಾ.

**ಮೀರಾ**— ಯಾರವರು ರಾಣಿ, ಯೇನನ್ನೋ ಕನವರಿಸುತ್ತಿರುವಿರಲ್ಲಾ. ನಿದ್ರಾವಸ್ಥೆಯಲ್ಲಿರುವಿರೇನು.

**ಚಂದ್ರು**— ಸುಖಸಾಮ್ರಾಜ್ಯದ ಕಲ್ಪನೆಯ ನಿದ್ರೆಯಲ್ಲಿ. ಕಲ್ಪವೃಕ್ಷದ ಮೊಗ್ಗೆಯನ್ನೊಂದು ಪಡೆಯಲು ಆತುರಗೊಂಡ ಮನ ಇದನ್ನೇ ಕನವರಿಸುತ್ತದೆ ಮೀರಾ.

**ಮೀರಾ**— ಇದಾವವಗಟು ನನಗೇನೂ ಅರಿಯದಾಯಿತು

**ಚಂದ್ರು**— ಕನಸು ನನಸಾಗುವ ವರೆಗೆ ವಡಿಯಲಾಗದ ವಗಟು

**ಮೀರಾ**— ಈ ಊರು ಬಿಡುವೆನೆಂದೂ ಹೇಳಿಯಲ್ಲಾ ಹಣಾ ಆಭರಣಾ ವಯ್ದು ಇಂದಿಗೆ ನಾಲ್ಕು ದಿನವಾದರೂ ಮನೆ ಬಿಡುವ ಮಾತೇ ಇಲ್ಲವಲ್ಲಾ

**ಚಂದ್ರು**— ಸರಿ ಅಷ್ಟು ಆತುರ ವಿದ್ದರೆ ಇಂದೇ ಹೊರಡ ಬಹುದಲ್ಲಾ

**ಮೀರಾ**— ಇನ್ನೂ ಮೀನಾಮೇಶವೆಂದುಕುಳಿತುಕೊಳ್ಳಬೇಕೆಲ್ಲ

**ಚಂದ್ರು**— ಹೊರಟು ಹೋಗಬಹುದೆಂದು ಆಗಲೇ ಹೇಳಿದೆನಲ್ಲಾ

**ಮೀರಾ**— ಯೆದ್ದೇಳಿ ಹಾಗಾದರೆ ಹೊರಡೋಣ

**ಚಂದ್ರು**— ಹೋಗಬೇಕೆಂಬ ಆಸೆ ನಿನಗಿದೆ ನನಗಿಲ್ಲ

**ಮೀರಾ**— ಇದೇನು ತಮ್ಮ ಮಾತಿನ ಓಘವೇ ಹೊಸ ತರಹದ್ದಿದೆ ಯಲ್ಲಾ ಯೇನಿದರರ್ಥ

**ಚಂದ್ರು**— ಅರ್ಥ ಮಾಡಿಕೊಳ್ಳುವ ಶಕ್ತಿ ನಿನಗಿಲ್ಲದ್ದರಿಂದಲೇ ವ್ಯರ್ಥ ತೊಂದರೆಗೊಳಗಾಗುತ್ತಿರುವಿ ಇನ್ನು ನನ್ನಾಶೆ ನಿರಾಕರಿಸಿ ಹೊರಟು ಹೋಗು ಇಲ್ಲವಾದರೆ ಕತ್ತು ಹಿಡಿದು ದಬ್ಬ ಬೇಕಾಗುವದು ? ಜೋಕೆ

**ಮೀರಾ**— ಯಾರಿಗಾಗಿ ನೀವು ಮಾತಾಡುತ್ತಿರುವದು

**ಚಂದ್ರು**— ಯದುರಿಗಿದ್ದ ನಿನಗಲ್ಲದೆ ಗೋಡೆಗೇಳುತ್ತಿರುವೆನೆಂದು ಭಾವಿ ಸಿದಿಯಾ

**ಮೀರಾ**— ಚಂದ್ರು ಇದೇನು ಚೇಷ್ಟೆಯೋ ಅನಿಷ್ಟದ ಸೂಚನೆಯೋ

**ಚಂದ್ರು**— ಚೇಷ್ಟೆ ಮಾಡಲು ನೀನೇನು ನನ್ನ ಪಟ್ಟದ ರಾಣಿಯೋ ಮೀರಾ ನಿನಗಿನ್ನು ಈ ಮನೆಯಲ್ಲಿ ಸ್ಥಾನವಿಲ್ಲಾ ವಳ್ಳೇ ಮಾತಿನಿಂದ ಹೊರಟು ಹೋಗು

**ಮೀರಾ**— ಹೊರಟು ಹೋಗಲು ನಿನ್ನ ಮನೆಗೆ ನಾ ಬಂದಿಲ್ಲಾ ಸಧ ನೀನೆಲ್ಲಿರುವಿ ಜ್ಞಾಪಕವಿದೆಯೋ ವಂದು ಹೆಂಣಿನ ಮನಾ ಕದ್ದು ಬಾಳು ಹಾಳ್ಗೆ ಮಾಡಿದೆ ಧನವನ್ನು ಅಪಹರಿಸಿದೆ ಥೂ ವಂಚಕಾ ನಿನಗಾಗಿ ಪತಿ ಅತ್ತಿ ಮಾವಂ ದಿರನ್ನು ಕಳೆದುಕೊಂಡೆ ಚಾಂಡಾಲಾ ನೀನು ಮಾನವನಲ್ಲಾ ಮಾರ್ಜಾಲಾ

**ಚಂದ್ರು**— ಮೀರಾ ಬಾಯಿಗೆ ಬಂದಂತೆ ಬೊಗಳದಿರು ದೇವಸಾಕ್ಷಿ ಯಾಗಿ ಕೈ ಹಿಡಿದ ಪತಿಯನ್ನೇ ತೊರೆದಾಗ ಕೊನೆಯವರೆಗೂ ನಾನು ನಿನ್ನೊ ಡನೆ ಇರಲೇಬೇಕೆಂಬ ನೇಮ ಯಾವ ಆಧಾರದಲ್ಲಿಯೂ ಇಲ್ಲವಲ್ಲಾ

**ಮೀರಾ**— ಅಂದ್ರೆ ಈಗ ಸಂಪೂರ್ಣ ನನ್ನನ್ನು ತ್ಯಜಿಸಿದಿರಾ

**ಚಂದ್ರು**— ಹೌದು ಆದರೆ ನಿನ್ನ ಮನದಲ್ಲಿ ಇನ್ನೂ ಇಲ್ಲವೆಂಬ ಭರವಸೆ ಇದೆಯೇ ನಿನಗೆ

**ಮೀರಾ**— ಚಂದ್ರ ಶೇಖರಾ ನಿನ್ನನ್ನು ನಂಬಿ ಯಲ್ಲರನ್ನೂ ತೊರೆದವ ಳಾದ ನನ್ನ ಕೈ ಬಿಟ್ಟು ಗತಿಹೀನಳನ್ನಾಗಿ ಮಾಡುವದು ಇದು ಯಾವ ನ್ಯಾಯಾ

**ಚಂದ್ರು—** ಮೀರಾ ನಿನಗಾಗಿ ತನ್ನ ಸರ್ವಸ್ವವನ್ನೇ ಅರ್ಪಿಸಿದ ಪತಿಯನ್ನು ವಂಚಿಸಿದ್ದು ನಿನಗೆ ಇದು ನ್ಯಾಯವೇ ಅತ್ತಿ ಮಾವಂದಿರು ಪರಮ ಪೂಜ್ಯರೆಂದು ವೇದವಾಕ್ಯವಿರುವಾಗ ಅವರನ್ನು ನಿನ್ನ ಸ್ವಾರ್ಥ ದಾಶೆಗೆ ಕಾಲು ಕಸವನ್ನಾಗಿ ಮಾಡಿದ್ದು ನ್ಯಾಯವೇ

**ಮೀರಾ—** ಚಂದ್ರು ಯಲ್ಲವೂ ನಿನಗಾಗಿ ಮಾಡಿದೆ

**ಚಂದ್ರು—** ಹಾಗಾದರೆ ಇಗಲಾದರೂ ನನಗಾಗಿ ಹೊರಟು ಹೋಗು

**ಮೀರಾ—** ದ್ರೋಹಿ, ಚಾಂಡಾಲಾ, ವಂಚಕಾ, ಪಾಪಿ, ನಾನೆಂದಿಗೂ ಬಿಡಲಾರೆ.

**ಚಂದ್ರು—** ಮುಚ್ಚುಬಾಯಿ ರಕ್ಕಸಿ, ಹೀಗೆ ನೀನು ಇರುವ ಛಲಹಿಡಿದರೆ ಇಂದೇ ನಿನ್ನ ಪ್ರಾಣಕ್ಕೆ ಕೊನೆಯದಿನ. [ಪಿಸ್ತೂಲ ತೋರಿಸುತ್ತ] ಅಂದು ಇದೇ ಮನೆಯಲ್ಲಿ ನಿನಗಾಗಿ ನಿನ್ನ ಮಿತ್ರನು ಪ್ರಾಣತೆಗೆದುಕೊಂಡ ಈ ಪಿಸ್ತೂಲು ನಿನ್ನ ಪ್ರಾಣದಾಸೆಗೆ ನಿಂತಿದೆ. ನೋಡು ಹುಂ ಯೇನನ್ನುವಿ.

**ಮೀರಾ—** ಚಂದ್ರು ನಿನ್ನ ಕಾಲಿಗೆ ಬೀಳುತ್ತೇನೆ ನನ್ನನ್ನು ಕೈಬಿಡಬೇಡಾ. ನಿನ್ನಾಜ್ಞೆಯ ತೊತ್ತು ನಾನು. ನಿನ್ನಾಶೆಗೆ ಯದುರಿಲ್ಲಾ ಹೊರದೂಡದಿರು.

**ಚಂದ್ರು—** ಹುಂ, ಹೊರಟುಹೋಗುವಿಯೊ ಇಲ್ಲವೆ ಇದಕ್ಕೆ ಬಲಿಯಾಗುವಿಯೋ.

**ಮೀರಾ—** (ಸಿಟ್ಟಿನಿಂದ) ಹೋಗುವೆ ಹೊರಟು ಹೋಗುವೆ. ಆದರೆ ಹೆಂಣೆಂದು ಜರೆದು ತೊರೆವ ನಿನಗೆ ಕೊನೆಗೊಂದುದಿನ ಪಾಠಕಲಿಸುವೆ, ನಾನು ಜಾರಿಣಿ, ನಿನ್ನ ಮರಣಕ್ಕೆ ಕಾಳಸರ್ಪಿಣಿ. ಇದೆಲ್ಲವೂ ನಿನ್ನ ಸ್ಮರಣೆಯಲ್ಲಿರಲಿ ಈ ನಾರಿ ನಿನ್ನ ಪ್ರಾಣನುಂಗುವ ಮಹಾಮ್ಮಾರಿ. ಯಚ್ಚರ.

**ಚಂದ್ರು—** (ನಗುತ್ತ) ಹುಂ ಹೊರಡು ಇಲ್ಲಿಂದಾ. ಅಬಲೆಯಾದ ನಿನ್ನಿಂದ ನನಗೇನಾಗಬೇಕಾಗಿದೆ. ಹೊರಟು ಹೋಗು.

**ಮೀರಾ—** ಥೂ! ಕಾಮಾಂಧನಾದ ಪಾಪಿ. ನಿನ್ನ ಮುಖ ನೋಡಲಾರೆ [ಹೋಗುವಳು]

**ಚಂದ್ರು**— [ಜೋರಾಗಿ ನಕ್ಕು] ತೊಲಗಿದವು ಯನ್ನಾಶೆಗೆ ಯದುರಾದ ಪಿಶಾಚಿಗಳು ಇನ್ನು ಈ ಮನೆಯೇ ನನ್ನದಾಯಿತು. ಆ ಸುಶೀಲೆಯನ್ನು ಶೋಧಿಸಿ ಅವಳನ್ನೆಳೆತಂದು ಈ ಮನೆಯ ರಾಣಿಯನ್ನಾಗಿ ಮಾಡುವೆ.

# ೧೭ನೇ ಪ್ರವೇಶ

(ಮೊದಲು ಮೀರಾ ಅಳುತ್ತಾ ಪದಾ ಅಂದು ಹೋಗುವಳು. ರಾಮನು ಅವಸರದಿ ಹೋಗುತ್ತಿರುವನು ನಿಂಗಿಯು ಕುಷ್ಟರೋಗದಿಂದಾ ಬಳಲುತ್ತ ಬೆನ್ನು ಹತ್ತಿಹಳು.)

**ನಿಂಗಿ**— ಯೇ ರಾಮಾ ರಾಮಾ, ನಿಲ್ಲೊ ಮಹಾರಾಯಾ. ಗಂಟಲ ಹರುವಾಂಗ ವದರಿದರೂ ದರಕಾರ ಇಲ್ಲೇನ ರಾಮಾ. ಬರಬರತ ನಿನಗೇನಾತು.

**ರಾಮೂ**— ನನಗಾಗಿಲ್ಲಾ, ನಿನಗಾಗ್ಯೆತಿ ನಾಟಕ ಕಂಪನಿ ಬ್ಯಾಡಂತ ಮೊದ್ಲೆ ಹೇಳ್ದೆ. ನನಮಾತಕೇಳ್ದ ಸೇರಿ. ಕಂಡವರಕೂಡ ಚಕ್ಕಂದಾಡಿ ಈಗ ಮೈಯೆಲ್ಲಾ ಕೆಡ್ಸಿಗೊಂಡು ಮಂದಿಗೆ ಮಾರಿತೋರಸದಾಂಗ ಆಗಿಂದ ಈ ರಾಮಾ ಬೇಕಾತೇನ ನಿನಗ. ಸರಿ ಹಿಂದಕ.

**ನಿಂಗಿ**— ಹಿಂದಕ ಆದದ್ದು ಮರತ ಬಿಡರಾಮಾ. ನಿನ್ನ ಸಲುವಾಗಿ ಅಲ್ಲಾ ಊರುಬಿಟ್ಟು ನಾಟಕಾಸೇರಿದ್ದು ಇನ್ನ ನೀಯಲ್ಲಿ ಇರೂ ಅಂತೀದಿ ಅಲ್ಲೇ ಇರೂನು.

**ರಾಮೂ**— ಈಗ ಇರದೇನ ಮಾಡಿ ಜೋಗವ್ವ ಆಗೀದಿ. ಹಾಡಿನ ಜೋಗಳಾ ನಿಂಗೀಯೇನ ವುರದೇ ತಾಸಿಗೊಂದು ಸೀರಿವುಟ್ಟು ಜರತಾರಿ ಬ್ಲೋಜತೊಟ್ಟು ತಲೆಮ್ಯಾಗ ಪುಗ್ಗಾ ಬಿಟ್ಟು ಮಾರಿಗೆ ಹಚ್ಚು ಬಂಣಾ ಖಾಯಂ ಇಟ್ಟು ನಾಚಗಿಯಲ್ಲಾ ಪೂರಾಬಿಟ್ಟು ಕಂಡಕಂಡ ಗಂಡಸೂರ ಕೈಯಾಗ ಕೈಕೊಟ್ಟು ಈ ರಾಮನ ಮೂಲ್ಯಾಗಿಟ್ಟು ಸಂಗನ ಕೈಯಾಗ ತಾಳಾಕೊಟ್ಟು ಚೈನಿಹೊಡದೀ. ಈಗ ಕೈಯಂದು ಬಾಯಂದು ಯಲ್ಲಾ ಕಳಕೊಂಡು ಕಲ್ಲಾ ಬಿಲ್ಲಿ ಆಗಿಂದ ಮತ್ತ ರಾಮನ ರಮುಸಾಕ ಬಂದಿಯಾ. ಸರಿಹಿಂದಕ ಹೊಲಸ ನಾರತೀದಿ.

**ನಿಂಗಿ**— ನಂದ ತಪ್ಪಾತ ರಾಮಾ. ನೀ ಕೈಬಿಟ್ಟರ ಯಲ್ಲಿಗೆ ಹೋಗಲಿ ಯಾವ ಭಾವಿ ನೋಡ್ಲಿ ಯಾವ ಗಿಡಾ ನೋಡ್ಲಿ ಹೇಳ ರಾಮಾ.

**ರಾಮೂ**— ಯಾವ ಭಾವಿ ಗಿಡಾ ಕೆರಿ ಯೇನು ವಳಕೊಳ್ಳುದಿಲ್ಲಾ ಧರ್ಮಸಾಲಿ ಹಾಳಗುಡಿ ಇವ ನಿನ್ನ ತವರ ಮನಿ ಸಾಗಿಸ್ನ ಕೈ ಪರಡಿಹಿಡ ಕೊಂಡು ಉರೂರುರಿಗೆ ವುದೋ ವುದೋ ಅಂತಾ ನಿಂಗಿ ಇಕಾ ನನ್ನಿಂದ ಬಂದಿ ಅಂದ್ರ ವಂದಕಾಲ ಮುರಿತಿನಿ ಬಲು ಜ್ವಾಕಿ

**ನಿಂಗಿ**— ರಾಮೂ ನೀನೀಗ ಹಿಂಗ ಮಾಡಿದ್ರ ಹ್ಯಾಂಗ ಬದಕೂದು ಅತ್ಲಾಗ ದೇವರಂಥ ಗಂಡನ ಕಳಕೊಂಡೆ ನೀನು ಕೈ ಬಿಟ್ರ ನನ್ನ ಗತಿಯೇನು ನಿಲ್ಲಾಕ ಬರವಲ್ಲದು ನರಾವಂದಸವನ ಜಗ್ಗ ತಾವ ಹೊಟ್ಯಾಗ ಸಂಕಟ ಆಗುತ್ತ ಡಾಕ್ಟರರಿಗೆ ಹೇಳಿ ಔಷಧಾ ಕೊಡಸು ನಮ್ಮಂಥಾ ಹೆಂಣಮಕ್ಕಳಿಗೆ ಮರಾಮರಾ ಅನಸಬ್ಯಾಡಾ ದೇವರು ಮೆಚ್ಚಾಕಿಲ್ಲ ರಾಮೂ

**ರಾಮೂ**— ಮನಸ ನೊಸುಧರ್ಮ ಗಂಡಸಿನಲ್ಲಿನು ಇರಬಾರದು. ಹೆಂಣಮಕ್ಕಳಲ್ಲಿನೂ ಇರಬಾರದು ಯಾರಮಾಡೂದೇನ್ಸೈತಿ ಮಾಡಿದ್ದು ವುಂಣಾಕ ಬೇಕಲ್ಲ. ಹುಂ ಸಾಗಲಿ ನಿನ್ನ ಗಾಡಿ ಹೊಂಡಿನ ಬಿಕ್ಷಕ ಹೆಜ್ಜಿಗೊವ್ಮೆ ರಾಮಾ ರಾಮಾ ಅನಕೊಂತ ಮಾಡಿದ ಪಾಪಕ. ಪಶ್ಚಾತಾಪಾ ಪಟಗೊಂತ

**ನಿಂಗಿ**— ಇಷ್ಟೆಲ್ಲಾ ಹೇಳತಿದಿ ನಿನಗ ಪಾಪ ಬಿಡತ್ತೇನೆ ರಾಮಾ.

**ರಾಮಾ**— ಬರೂ ಪಾಪ ನಮಗೂ ಬರ್ಲಿ. ನಮಗೂ ಅಷ್ಟ ಖಾತ್ರಿನ ಐತಿ. ನಾನು ವಂದಿನಾ ದಾರೀ ಹೆಣಾನ. ಆಗಲಿ ನಿಂಗೂ ಇನ್ನಿಲ್ಲ ನಿನ್ನಹಂಗು ಹತ್ತೈತ್ಯೊ ನಿನ್ನ ಬಾಳೇಕ ಜಂಗ. ವಾರಿಗೆ ಹತ್ತೈತಿಭಂಗ ಸಾಕಾಯಿತು ನಿನ ಸಂಗ. ಬರತೀನ್ರಿ ನಿಂಗವ್ವನರ ಬರತೀನಿ ಶರಣು (ಹೋಗುವನು)

**ನಿಂಗಿ**— [ಅಳುತ್ತ] ಆಯ್ಯೋ ಯಲ್ಲಾರು ಕೈಬಿಟ್ರು ನಾಟಕ ಕಂಪನಿ ಮಾಲಕಾ ಕೈಕೊಟ್ಟಾ ಪೇಟಿಮಾಸ್ತರ ಹೊಡ್ತಾಕೊಟ್ಟಾ ಕಲಸು ಮಾಸ್ತರ ಕೈಯಾಗ ಪರಟಿಕೊಟ್ಟಾ ಗಂಡಾಮರತಬಿಟ್ಟಾ ಇನ್ನೇನ ಮಾಡ್ಲಿ. ಹೊಟ್ಟಿಗೆ ಅನ್ನ ಇಲ್ಲಾ ಕೈಯಾಗ ಕಾಸ ಇಲ್ಲಾ ಮೊದಲ ಇದೆಲ್ಲಾ ತಿಳಿಲಿಲ್ಲಾ ಈ ರಾಮನ ಮಾತ ಕೇಳಿ ಇಷ್ಟೆಲ್ಲಾ ಆತಲ್ಲಾ ಯೇನ ಮಾಡಲೀ ರಾಮಾ ರಾಮಾ.

## ನಿಂಗಿಪದ

(ನಿಂಗಿ ಪದಾ ಅನ್ನುತ್ತಾ ಹೋಗುವಳು ಅದೇ ರಸ್ತಾದಲ್ಲಿ ರಘು ಹುಚ್ಚನಂತೆ ಪ್ರವೇಶಿಸುವನು)

**ರಘು**— ಕೊಲೆಗಾರಾ ನಾನು ಕೊಲೆಗಡಕಾ ನನ್ನನ್ನುಯಾರೂ ಗುರ್ತಿಸರು ನನ್ನನ್ನು ಯಾರು ಬಂಧಿಸರು ಇಂದಿನ ವರೆಗೂ ಫರಾರಿಯಾಗಿದ್ದ ನನಗೆ ನೀನೇ ರಘು ಯಂದು ಹೇಳುವವರು ಯಾರು ಇರುವದಿಲ್ಲಾ ಹಾಂ ಇವೆ ಗಿಡಗಳಿವೆ ಪಕ್ಷಿಗಳಿವೆ ಮೇಲೆ ದೇವನಿದ್ದಾನೆ ಇವನೇ ಕೊಲೆಗಾರನೆಂದು ಯಲ್ಲವೂ ನನ್ನತ್ತ ನೋಡುತ್ತಿಹವು ನಾನು ಮಾತೃದ್ರೋಹಿ ಮೋಲೆಯುಂಣಿಸಿ ತುತ್ತಿಟ್ಟು ಜೋಪಾನ ಗೈದ ತಾಯಿಯನ್ನೇ ಕೊಂದ ಮಹಾಪಾಪಿ ಅಮ್ಮಾ ನಿನ್ನನ್ನು ಕೊಂದು ಹಾಕಲೆಂದು ನನ್ನ ಬೆಳಿಸಿ ದೊಡ್ಡವನನ್ನಾಗಿ ಮಾಡಿದಿಯೇನಮ್ಮಾ ಇದಕ್ಕೆಲ್ಲಾ ಕಾರಣ ಆ ಮೀರಾ ಮಾಟಗಾರ್ತಿಯಾದ ಮೀರಾ ಅಮ್ಮಾ ನಾನ ಮಾತೃದ್ರೋಹಿ ಚಾಂಡಾಲಾ ಈ ಜಗದಲ್ಲಿ ನನಗೆ ಶಿಕ್ಷೆ ಆಗದಿದ್ದರೂ ಮೇಲೆ ನನಗಾಗಿ ಕಾಯ್ದು ಕುಳಿತಿದೆ ಶಿಕ್ಷೆ ಬಂದೆ ಅಮ್ಮಾ ನಿನ್ನ ಸಾನಿಧ್ಯಕ್ಕೆ ಬಂದೆ ನನ್ನನ್ನು ಕ್ಷಮಿಸಮ್ಮಾ ಅಮ್ಮಾ ಅಮ್ಮಾ (ಹೋಗುವನು)

(ಅದೇ ರಸ್ತಾದಲ್ಲಿ ರಂಗಪ್ಪ ಪದಾ ಅನ್ನುತ್ತಾ ಬಿಕ್ಷೆ ಬೇಡುತ್ತಾ ಬರುವನು)

**ರಂಗಪ್ಪನ ಪದಾ**

(ಪದಾ ಮುಗಿದ ನಂತರ ಹೋಗುವನು)

## ೧೮ ನೇ ಪ್ರವೇಶ

ಜಂಗಲದಲ್ಲಿ ಬಸವೇಶ್ವರನ ಗುಡಿ ಗುಡಿಯ ಮುಂಬಾಗದಲ್ಲಿ ಕೂಸು ಅಳುತ್ತಿರುವನು ಸುಸೀಲಾ ಹೊರಗಿನಿಂದ ಬಂದು ಕೂಸನ್ನು ಯತ್ತಿ ದುಃಖಿಸುವಳು

ರಾಗ **ಸುಶಿಲಾ ಪದಾ** ಜೋಗಿ

ದಯಾದೋಲೋ ದೇವಾ ಯನಗೆ ||ದ||
ಹೊಟ್ಟೆಗೆ ಅನ್ನಿಲ್ಲಾ ಮಗುವಿಗೆ ಹಾಲಿಲ್ಲ ||
ಬೇಗನೇ ರಕ್ಷೀಸು ದೇವಾ ||ದ||
ಅಮ್ಮಾಯಂದು ಅಳುವದು ಕಂದಾ ||
ಈ ಪರಿಯಿಂದಲಿ ಬಳಲಿಸುವದೇನು ||
ದಯತೋರೋ ದೇವಾ ಯನಗೆ ||ದ||

**ಸುಶಿಲಾ**— ಮಗು ಅಳಬೇಡಪ್ಪಾ ಹಾಲಿಗಾಗಿ ಹಸಿದು ಮಾಡುತ್ತಿರುವ ನಿನ್ನ ಶೋಕ್ಷಯನ್ನ ಹೃದಯಕ್ಕೆ ಸಿಡಿಲು ಬಡದಂತಾಗುವದಪ್ಪಾ ಯೇನು

ಮಾಡಲಿ ಯಲ್ಲಿ ತಿರಗಿದರೂ ಹನಿಹಾಲು ದೊರೆಯಲಿಲ್ಲವಪ್ಪಾ ಮೂರುದಿನ ಅನ್ನ. ಅನ್ನವೆಂದು ಹಲಬಿ ತಂಣಗೇ ಇಕಾನನದ ಮಧ್ಯ ಕುಳಿತ ನನ್ನ ಮೊಲೆಯಲ್ಲಿ ಹನಿಹಾಲು ಸಹಾ ಇಲ್ಲವಪ್ಪಾ ಸೊಲ್ಲು ಸೊಲ್ಲಿಗೆ ಅಮ್ಮಾ ಅಮ್ಮಾಯೆಂದು ಬಾಯಿ ಬಿಡುವ ಆರ್ದ್ರಧ್ವನಿಯು ಶಾಂತವಾಗಲು ನಿನಗೆ ಕೊಡಲು ನನ್ನಲ್ಲಿ ಯೇನಿದೆಯಪ್ಪಾ ಇಂಥ ಕಷ್ಟದಿಂದ ಬಲಳುವ ನಿನ್ನ ತಾಯಿಯ ಮಮತೆಯನು ಪರೀಕ್ಷಿಸುವಿಯೇನಪ್ಪಾ ಆಗಲಿ ನಿನಗಾಗಿ ಹಾಲುಗರಿಯಲು ನಿರ್ಮಿತವಾದ ಈ ಮೊಲೆ ಕೊಯ್ದು ನಿನ್ನ ಬಾಯಿಯಲ್ಲಿರಿಸುವೆನು ಆಗಲಾದರೂ ನಿನ್ನ ಹಸುತೃಸೆ ಯನ್ನು ನೀಗಿ ಆನಂದದಿಂದ ಆಡು ಮಗು ಇದೇ ಯನ್ನ ಕೊನೆಯ ಪರೀಕ್ಷೆ (ಮಗುವನ್ನು ಕೆಳಗೆ ಹಾಕಿ ಚುರಿಯನ್ನು ಹುಡುಕುವಷ್ಟರಲ್ಲಿ ಚಂದ್ರು ಪ್ರವೇಸಿ ಸುವನು)

**ಚಂದ್ರು**— ಸುಶೀಲೆ ನೀನಿನ್ನು ಚಿಂತಿಸದಿರು ನಿನ್ನ ಮಗುವಾಗಿ ಬಳ ಲುವದನ್ನು ನೀಗಿಸುವದಕ್ಕಾಗಿ ನಿನ್ನನು ಹುಡುಕುತ್ತ ಧಾವಿಸಿ ಇಲ್ಲಿಗೆ ಬಂದಿ ರುವೆ. ಯೇಕೆ ಅಳುತ್ತಿರುವಿ ಆ ವಕೀಲನನ್ನು ಮರೆತು ಬಿಡೆಂದು ನೂರುಸಲ ಹೇಳಿದರೂ ಆತನೇ ಪರಮಪತಿಯೆಂದು ಸ್ಮರಿಸದ ಗತಿ ಹೀಗಾಯಿತು. ಅವ ನನ್ನು ಮರೆತು ನಿನ್ನೆದುರಿನಲ್ಲಿರುವವರನ್ನು ನೋಡಿ ಸಂತೋಷದಿ ಕಾಲಕಳೆ ಯುವಿಯಂತೆ. ಸಾಗಿ ಬಾ ನನ್ನೊಡನೆ ಬೇರಾವ ಆಲೋಚನೆಯನ್ನು ಮಾಡ ಬೇಡಾ ತಿಳಿಯಿತೆ.

**ಸುಶೀಲಾ**— [ಘಾಬರಿಯಿಂದ] ಚಂದ್ರಶೇಖರಂಣಾ ಮತ್ತೆ ಇಲ್ಲಿಗೆ ಬಂದಿಯಾ. ನಿನ್ನ ವಡಹುಟ್ಟಿದ ತಂಗಿಯೇ ನಾನೆಂದು ತಿಳಿ ಅಂಣಾ. ಆ ಪತಿ ಯು ಯಲ್ಲಿ ಇದ್ದರೂ ಹೇಗಿದ್ದರೂ ಅವರ ಹೃದಯ ನಿರ್ಮಲ ದುಷ್ಟಗ್ರಹಗಳ ಕಾಟದಿಂದ ನಮ್ಮನ್ನು ಹೊರನೂಕಿಹರೇ ವಿನಃ ಬೇರೊಂದಿಲ್ಲಾ. ಕೊನೆಗೊಂದು ದಿನ ಸತಿಯ ನೆನಪಾಗಿ ಬಾರದಿರರು ಇದನ್ನರಿತು ನನ್ನ ಮರೆತು ಇಲ್ಲಿಂದಾ ಹೊರಟು ಹೋಗಂಣಾ.

**ಚಂದ್ರು**— ಮತ್ತೇಕೆ ಮರಳಿ ಬರುತ್ತಾನೆ. ನಿಮ್ಮನ್ನು ಹೊರಗೆ ಹಾಕಿ ಧನಮದದಿಂದ ಲೋಲುಪ್ತನಾಗಿ ಮರೆಯುತ್ತಿರುವನು ಆವಕೀಲಾ. ಅವನನ್ನು ನೀನು ಮರೆತು ಯನ್ನೊಡನೆ ಬೆರೆತು ಸುಖದಿಂದಾ ಜೀವಿಸುವಿಯಂತೆ ಆದ

ಕ್ಕಾಗಿ ಇದೋ ಈ ವಜ್ರದರಳಿ ಸರವನ್ನು ತಂದಿರುವೆ ತೆಗೆದುಕೊ ಕಟ್ಟಿಕೊ ನಿನ್ನ ಕೊರಳಿಗೆ.

**ಸುಶೀಲಾ**— ಅಂಣಾ. ಶೀಲವತಿಯಾದವಳಿಗೆ ಇದು ಭೂಷಣವಲ್ಲಾ ಆರ್ಯಕುಲ ಸ್ತ್ರೀಯರ ಕೊರಳಿಗೆ ಪತಿಯು ಮುಕ್ತ ಹಸ್ತದಿಂದ ಕಟ್ಟಿದ ಈ ಮಾಂಗಲ್ಯವೇ ಭೂಷಣ. ಇಂಥ ಸಾವಿರಾರು ಸರಗಳ ಮೇಲ್ಮಣೆಯೇ ಈ ಕರಿ ಮಣಿಯು ಕಾರಣ ಬೇಗ ತೊಲಗು ಆಚೆಗೆ.

**ಚಂದ್ರು**— ಸುಶೀಲೆ ಯೇನೆ ಇರಲಿ ಯಂದು ಬಾಯ ತೆರದು ಕಟ್ಟಿಕೊ ಯಂದು ಹೇಳಿದರೆ ಇಲ್ಲದ ಬಡಿವಾರದ ಮಾತುಗಳನ್ನು ಕೊಚ್ಚ ಬೇಡಾ ಇದನ್ನು ಕೇಳುವವರಾರು ಹಿಂದೊಮ್ಮೆ ನಾನು ನಿಮ್ಮ ಮನೆಗೆ ಬಂದಾಗ್ಯೂ ಮಾನಕಳೆದಿರುವ. ಆಶೇಡಿನ ಪ್ರತಿಫಲಕ್ಕಾಗಿಯೇ ನಿನ್ನನ್ನು ಬೆನ್ನು ಹತ್ತಿಹೆಯನು. ಈ ಸಮಯ ನೀಯೇನೇಳಿದರೂ ಬಿಡುವದಿಲ್ಲಾ. ಬಲತ್ಕಾರ ದಿಂದ ಹೊತ್ತೊಯ್ಯುವೆ. ಯಾರು ಬಂದು ಉಳಿಸುವರೊ ಉಳಿಸಲಿ ನಿನ್ನ ಮಾನ.

**ಸುಶೀಲಾ**— ಕಾಮುಕಾ ಯೇರಿಬಂದು ನನ್ನ ಮಾನಕಳೆಯಲು ಹೊಂಚುಹಾಕಿದ ನಿನೇಕೆ ನಿನ್ನಂಥಾ ಸಾವಿರಾರು ದುಷ್ಟರಕ್ಕಸರಿಂದಲೂ ಸಾಧ್ಯ ವಿಲ್ಲಾ ನನ್ನನ್ನು ನನ್ನ ಮಾತೆ ಪತಿವೃತ್ಯ ಪ್ರಭಾವದಿಂದ ಹೆತ್ತಿದ್ದರೆ ನನ್ನ ಮಾಂಗ ಲ್ಯವು ಸತ್ಯವಾಗಿ ಪಾತಿವೃತ್ಯದ ಸತ್ಯವನ್ನು ಯತ್ತಿ ತೋರಿಸುವ ಮುತ್ತಾಗಿದ್ದರೆ ನೀನು ಈಗೇಕೆ ಇನ್ನು ನೂರು ಜನ್ಮದಲ್ಲಿ ಹುಟ್ಟಿಬಂದರೂ ನನ್ನ ಮಾನಭಂಗ ಪಡಿಸಲಾರೆ ಇದಕ್ಕೆ ನನ್ನ ಪತಿಯ ಪಾದವೇ ಸಾಕ್ಷಿ. ಇದು ತಿಳಿದು ನನ್ನನ್ನು ಕೆಣಕದಿರು. ದೇವಾ ಬಸವೇಶ್ವರಾ, ನಿನ್ನ ಸಮ್ಮುಖದಲ್ಲಿ ಇಂಥ ದುರ್ಧರ ಪ್ರಸಂಗ ನಡೆದರೂ ಕಣ್ಮುಚ್ಚಿ ಕೇಳಿತಿರುವೆಯಾ. ಆಗಲಾಗಲಿ ಇದರಲ್ಲಿ ತಿಳಿದು ಹೋಗಲಿ, ಭಾರತಿಯ ಗರತಿಯರ ಸತಿಸತ್ವ

**ಚಂದ್ರು**— ಯನೇ ಸುಸೀಲೆ ಕೈಯಲ್ಲಿ ಸಿಕ್ಕ ಅಮೃತವನ್ನು ಪಾನ ಮಾಡದೆ ದೂರ ಬಿಸಡುವದೇ ನಿನ್ನ ರೂಪಶಿರಿಸವಿಯಲು ಅತುರ ಪಡುವ ನನ್ನ ಕಂಣಲ್ಲಿ ಬೇರಾವದೂ ಕಾಣದು ಈ ನಿನ್ನ ಯೌವ್ವನದ ಸವಿಯನ್ನು ಸೇವಿಸದೆ ಮರಳಿ ಹಿಂದಕ್ಕೆ ಹೋಗಲಾರೆ ನಿನ್ನ ಜೊಳ್ಳು ತತ್ವವ ಹರಿದು ನಿನ್ನ ಕಟ್ಟಳಿಯ ಮುರಿದು ಯನ್ನೊಡನೆ ಕೂಡು ಬಾ ನೀನೆಷ್ಟು ಕಿರಚಿದರೂ ಪಾರಾಗಲಾರಿ

ನನ್ನಿಂದಾ. ಸುಸೀಲೆ ಈಗ ನಾನು ನಡೆಸಿರುವ ಕಾರ್ಯಕ್ಕೆ ಯಾರು ಬಂದು ವುಳಿಸುವರು ನೋಡುವೆ (ಯಳೆಯಲಿಕ್ಕೆ ಹೋಗುವನು)

**ಸುಶಿಲಾ**— ( ಕಪಾಳಕ್ಕೆ ಹೊಡೆದು ) ಥೂ ಪಾಪಿ ವುಬ್ಬಿನಿಂದ ಕಾಮ ಮದವೇರಿ ಅಬ್ಬರದಿಸಾಗಿ ಬಂದೊಡನೆ ಆದಕ್ಕೆ ಬಲಿಯಾಗುವ ನಾರಿ ನಾನಲ್ಲ ಭಾರತೀಯ ವುತ್ರಿಯಾದ ಆರ್ಯ ಮಹಿಳೆ ಇರುವೆನು ಸರಿ ಆಚೆಗೆ

**ಚಂದ್ರ**— ( ಕೆನ್ನೆಯನ್ನು ಹಿಡಿದುಕೊಂಡು ) ಸುಸೀಲೆ ಯನ್ನ ಕೆನ್ನೆಗೆ ಹೊಡೆದ ನಿನ್ನ ಕೆಂಪಾದ ಕೈಗಳನ್ನು ಪಿಡಿದು ಅಧರಾಮೃತವನ್ನು ಸೇವಿಸದಿದ್ದರೆ ನಾನು ಚಂದ್ರ ಶೇಖರನಲ್ಲಾ ನೋಡು ಹಾಗಾದರೆ

[ಮತ್ತೆ ಯಳಯಲಿಕ್ಕೆ ಹೋಗುವನು ಹೊರಗಿನಿಂದ ರಂಗಪ್ಪನುಬರುವನು ಅವನನ್ನು ನೋಡಿ] ಅಯ್ಯೋ ನನ್ನ ಕಾರ್ಯವೆಲ್ಲವೂ ಮತ್ತೆ ನಿಷ್ಫಲವಾಯಿತು ಮತ್ತೇ ಆ ರಂಗನು ಬಂದನಲ್ಲಾ ಬೇಗ ಇಲ್ಲಿಂದಾ ಪಲಾಯನ ಮಾಡುವದೇ ಲೇಸು ( ಓಡಿಹೋಗುವನು )

**ಸುಶಿಲಾ**— ದೇವಾ ಬಸವೇಸ್ವರಾ ಇಂಥಾ ಭವಬಂಧನಕ್ಕೆ ಶಿಲ್ಕುಸಿ ಇನ್ನು ಪರೀಕ್ಷಿಸಬೇಕೆನ್ನುವಿಯಾ ಯಲ್ಲವೂ ನಿನ್ನಿಚ್ಛೆ

ಪದಾ

**ರಂಗಪ್ಪಾ**— (ಜೋಳಗಿ ಹಿಡದುಕೊಂಡು) ಯೇಳು ತಾಯಿ ಯಷ್ಟ ಅತ್ತರೂ ತೀರದು ಈ ಕಷ್ಟ ಅದಕಂತ ನಾಲ್ಕು ಮನಿ ತಿರುಗಿ ಸ್ವಲ್ಪ ಅನ್ನಾ ತಂದಿನಿ ತಾಯಿ ಮೂರುದಿವಸದಿಂದಾ ವುಪಾಸ ಅದೀದಿ ಕೂಸಿ ನ್ಯಾಕಿ ವೊದಲ ಸ್ವಲ್ಪ ವುಣತಾಯಿ

**ಸುಶಿಲಾ**— ಮಾಮಾ ನಮ್ಮ ದೈವದಲ್ಲಿ ಆ ಬೊಮ್ಮನ ಲಿಕಿತವೇ ಹೀಗಿದ್ದ ಮೇಲೆ ಅದನ್ನು ತಪ್ಪಿಸಲೂ ಯಾರಿಂದಲೂ ಸಾಧ್ಯವಿಲ್ಲಾ ಕಾರಣ ನೀವು ಈ ಮಗುವನ್ನು ಸಂರಕ್ಷಿಸಿರಿ ನಾನು ಯಾರ ಮನೆಯನ್ನಾದರೂ ಮುಸುರಿ ಯನ್ನು ಮಾಡಿ ಕೂಲಿ ತರುವೆ ತಿರಿದು ಮಾತ್ರ ತರಲಾರೆ ತಿಳಿಯಿತೆ

**ರಂಗಪ್ಪಾ**— ಸುಶಿಲವ್ವಾ ನಿನ್ನಂಥಾ ಬಾಣತೀ ದುಡಿಯಾಕ ಕಳಿಸಿದರ ಜನರು ಯೇನಂದಾರ ತಾಯಿ ನಾನ ಕೂಲಿ ಸಿಕ್ಕ ದಿವ್ಸ ದುಡಿತೀನಿ ಅದರಾಗ ಕಾಲ ಹಾಕನು ಯಷ್ಟು ದಿವ್ಸ ಕಾಡುವನೋ ಕಾಡಲಿ ಪರಮಾತ್ಮಾ

**ಸುಶಿಲಾ**— ದೇವಾ ನಾನಾವ ಪಾಪ ಮಾಡಿರುವನೆಂದು ಈತರಹ ಶಿಕ್ಷೆ ವಿಧಿಸುತ್ತಿರುವಿ ಧರ್ಮದಿಂದ ನಡೆದರೂ ನಿನಗೆ ದಯ ಇಲ್ಲವೇ ಭಕ್ತ ರಕ್ಷಕನೆಂಬ ನಾಮ ನಿನಗಿರಲು ಈ ಹಸು ಮಗುವನ್ನು ಕಟ್ಟಿಕೊಂಡು ಅನ್ನಕ್ಕಾಗಿ ಹಂಬಲಿಸುವ ನಾವು ನಿನ್ನ ಭಕ್ತರಲ್ಲವೆ ಇದುವೇ ನಿನ್ನ ಭಕ್ತ ರಕ್ಷಣೆ

**ರಂಗಪ್ಪಾ**— ಅಮ್ಮಾ ನಮ್ಮ ಕರ್ಮಕ್ಕ ದೇವರನ್ನ ಯಾಕ ನಿಂದಿಸುವಿ ತಾಯಿ ನಮ್ಮನ್ನ ಇನ್ನೂ ಪರೀಕ್ಷಿಸಬೇಕೆಂಬ ಆಶ ಅವನಿಗಿದ್ದರೆ ಯಾರೇನು ಮಾಡುವರು ಬಾ ಅವ್ವಾ ಅಷ್ಟರೊಟ್ಟಿ ಅನ್ನಾ ತಂದೀನಿ ಇದರಾಗ ವುಣ್ಣುನು ಪಾಲಿಗೆ ಬಂದದ್ದು ಪಂಚಾಂಮೃತ ಅಂತಾ

**ಸುಶಿಲಾ**— ನಾನೊಲ್ಲೆ ಮಾಮಾ ನೀವೆ ವುಟ ಮಾಡಿರಿ

**ರಂಗಪ್ಪಾ**— ಹಾಂಗ ಮಾಡಬ್ಯಾಡ ತಾಯಿ ಇಬ್ಬರೂ ಕೂಡೇ ವುಂಣನು ನೀ ಮೊದಲು ವುಂಣು ಕುಸು ಇದ್ದಾಕಿ ಹೊಟ್ಟಿ ತುಂಬಾ ವುಣ್ಣು ವುಳದ್ರ ನಾ ವುಣತೀನಿ

**ಸುಶಿಲಾ**— ಮಾವಾ ನಿಜವಾಗಿಯೂ ನೀನು ನನ್ನ ಮಾವನಲ್ಲಾ ನನ್ನ ಹೆತ್ತ ತಂದೆ ಮಕ್ಕಳಂತೆ ಜೋಪಾನಮಾಡುವ ಈನಿನ್ನ ಋಣವನ್ನು ಯಾವ ಜನ್ಮದಲ್ಲಿ ಮುಟ್ಟಿಸಲಿ ಯಾವ ಜನ್ಮದ ಪುಣ್ಯವೋ ನೀನು ನನಗೆ ಮಾವನಾಗಿ ದೊರೆತದೂ

**ರಂಗಪ್ಪಾ**— ಇರಲಿ ಬಾ ಅವ್ವಾ ಮೊದಲ ವುಂಣ ಬಾ ( ವುಟಕ್ಕೆ ಕೂಡ್ರುವರು)

**ಇಶ್ವರಪ್ಪಾ**— (ಹುಚ್ಚನಾಗಿ) ಅಮ್ಮಾ ಹಸಿವೆಯಾಗಿದೆ ಅನ್ನಾ ಅನ್ನಾ

**ರಂಗಪ್ಪಾ**— ಅಲಾ ಇವನ ಯುಂಥಾ ಅಡಿವ್ಯಾಗ ಬಂದಿದಲ್ಲೋ ಮುದಕಾ ಬಾ ಇದರಾಗ ನೀನು ವುಣ ಬಾ

**ಸುಶಿಲಾ**— (ಗುರ್ತಿಸಿ) ಮಾಮಾ ಇವರು ಇಶ್ವರಪ್ಪನವರು

**ರಂಗಪ್ಪಾ**— ಹಾ ನನ್ನೊಡೆಯಾ ನನ್ನ ತಂದೆ ( ಅಪ್ಪಿಕೊಳ್ಳುವರು ) ಲಕ್ಷ ಜನರಿಗೆ ದಾನ ಮಾಡಿದ ನಿನ್ನ ಕೈ ಇಗ ಬಿಕ್ಷಾ ಬೇಡು ಆಗಬೇಕೆ ದೇವರ ನಮ್ಮ ತಂದಿಗೆ ಯಂಥಾ ಹೊತ್ತ ತಂದಿಪಾ ಬಾ ಅಪ್ಪಾ ಮೊದಲು ವುಂಣು

**ಸುಶೀಲಾ**— ಮಾವಾ ಮೊದಲು ಇವರಿಗೆ ಊಟ ಮಾಡಿಸೋಣ ವುಳಿದರೆ ನಾವು ಊಟ ಮಾಡೋಣ ತುತ್ತಿಟ್ಟು ನಮ್ಮನ್ನು ಜೋಪಾನ ಗೈದ ಈ ತಂದೆಯ ಹಸಿವು ನೀಗಿದರೆ ಸಾಕು

(ಯಲ್ಲರೂ ಊಟ ಮಾಡಲಿಕ್ಕೆ ಕೂಡ್ರುವರು)

## ೧೯ನೇ ಪ್ರವೇಶ

### ರಸ್ತಾ

ಮೀರಾ ಪಿಸ್ತೂಲ ಹಿಡಿದುಕೊಂಡು ಹುಚ್ಚಳಂತೆ ಪ್ರವೇಶಿಸುವಳು.

**ಮೀರಾ**— ಇನ್ನುಳಿಯಬೇಡಾ ಯಲೆ ಪಾಪಿ ಜೀವವೇ ಸ್ತ್ರೀಕುಲದ ಧರ್ಮತತ್ವದ ತಳಹದಿಯನೇ ಉರಳಿಸಿದೆ. ಪವಿತ್ರ ಮಾಂಗಲ್ಯಕ್ಕೆ ವಂಚಿಸಿ ಪಾಪಿಯಾದೆ. ಸ್ವಾರ್ಥದಾಶೆಗೆ ಪರಪುರುಷನೋಳ್ ಕೂಡಿ ಚಲ್ಲಾಟವಾಡಿ ಪತಿ ಮನೆ ಹಾದರ ಮಂದಿರವನ್ನಾಗಿ ಮಾಡಿದೆ. ಅತ್ತೆಮಾವಂದಿರ ಸೇವೆಮಾಡಲಿಲ್ಲಾ. ಮತ್ತೆ ಪ್ರಾಣ ಸಂಹಾರಿಯಾದೆ. ಇನ್ನೇಕೆ ಈ ಪಾಪಿ ದೇಹವನು ಈ ಭೂವ್ಮಿಯಮೇಲೆ ಇಡುವದು. ನೀಗುವೆ ಅಸುನೀಗುವೆ ನನ್ನ ಪಾಪಸಾರಲು ಜೇವ ನಲ್ಲಿಗೆ ಸಾಗುವೆ. ಯಲೆ ಪಾಪಿ ಕರವೆ ಹಾರಿಸು ಗುಂಡು ಇನ್ನೂ ಬಮಕ ಬೇಕೆನ್ನುವಿಯಾ. ಇಲ್ಲಾ ಹೆಂಣನ್ನು ಮೋಹಸಿ ಪತಿಯನ್ನು ಅಗಲಸಿ ಪಾಪ ದಲ್ಲಿ ನೂಕಿದ ಆ ಕ್ರೂರ ಗಂಡು ಪ್ರಾಣಿಯೊಂದನ್ನು ಮೊದಲು ಸಂಹರಿಸ ಬೇಕ,. ಉಳಿಸಿದರೆ ನನ್ನಂಥಾ ಸಾವಿರಾರು ಅಬಳೆಯರು ಬಲಿಯಾಗ ಬಹುದು ಆಕ್ರೂರನ ಜಾಲಕ್ಕೆ ನಿಜ. ಮೊದಲು ಅವನ ಆಹುತಿ ನಂತರ ನನ್ನಬಲಿ ನಿಜ ನಿಜ (ನಗುತ್ತಾ ಹೋಗುವಳು)

ಅದೇರಸ್ತಾ ಸಂಗನು ಪಂಡರಪುರ ಸಂತರಂತೆ ಭಜನೆ ಅನ್ನುತ್ತ ಬರುವನು.

**ಸಂಗ**— ಛೇ ! ಛೇ ! ನಿಂಗಿ ಹುಡುಕುನು ಅಂದ್ರ ವುಗಡಹೋತು. ವಂದು ಊರ ಉಳಿಲಿಲ್ಲಾ ವಂದ ಓಣಿ ಉಳಿಲಿಲ್ಲಾ. ವಂದ ಹಳ್ಳಿ ಉಳಿ ಲಿಲ್ಲಾ ಪಂಡರಪುರಕ ಹೋಗಿದ್ದೆ ಅಲ್ಲೀನು ಸಿಗಲಿಲ್ಲಾ ಯಂಥಾಕಂಪನಿ ಸೇರಿದ್ಲಪಾ ಅಂತಿನಿ. ಯೇನ ಈ ಲೋಕಾನಬಿಟ್ಟಳೇನು ಅಂತಾ. ಅಲ್ಲಾ ಯೇನ ಹೆಣತಿ ಹುಚ್ಚುಹಿಡಿತಪಾ ಈಕಿ ಸಲುವಾಗಿ ಸುಮನ ತಲಿ ಕೆಡಸ ಕೊಂಡ ಹುಡುಕುದಕಿಂತಾ ದೇವರ, ಹುಡುಕಿದರ ಇಷ್ಟ, ಹೊತ್ತಿಗೆ ಭೆಟ್ಟಿ,

ಯಾಗಿ ಬಿಡತಿದ್ವಾ. ಹುಚ್ಚ್ಯಬಿಡದ ಈಗುಣಾ ಇಲ್ಲಾ ಗುಣಾ ಆಗದ ಗತಿ ಯಿಲ್ಲಾ ಸಾಕಿನ್ನ ಹುಡುಕೂದು ಸಾಕ ಈ ಭವಬಂಧನ ಮನಿಸ್ಯಾಗ ಇದ್ದಂಗ ಸುಮಕ ಮಠಾ ಸೇರಿ ಕಪನಿಹಾಕಿ ವಿಠೋಬನ ಭಜನಿನ ಮಾಡುನು ಸಾಕೀ ಸಂಸಾರ

**ನಿಂಗಿ**— (ನರಳುತಾ) ಯಪ್ಪಾ ಕುಡಿಯಾಕ ಓಟ ನೀರು ಹಾಕ್ರಿ ಯಪ್ಪಾ ಓಟ ಅನ್ನಾ ನೀಡ್ರಿ ಹೊಟ್ಯಾಗ ಸಂಕಟ ಆಗತ್ತ. ವೈಯಾಗ ಚಲೋ ಇಲ್ರಿ ವೈಉರಿತ್ತೈತ್ರಿ

**ಸಂಗ**— ಅಲಲಲಲ ಇದ್ಯಾವದಪಾ ಹುಚ್ಚಿ ನಮುದ ನಮುಗ ರಗಡ ಆಗೈತಿ ಇದ್ದೆಲ್ಲಿ ಕೊಡ್ಲಿ ಅನ್ನಾ ನೀರು

**ನಿಂಗಿ**— ನಾ ಇಷ್ಟ ಬಡಕೊಂಡ್ರು ಹಂಗನಿಂತಿಯಲ್ಲ ಯಪ್ಪಾ

**ಸಂಗ**— (ದಿಟ್ಟಿಸಿನೋಡಿ) ಅಬಬಬಬ ನಮುದ ಅಲ್ಲಾ ಇದು ಡೋಲಿ ನಿಂಗೂ ನಿಂಗೂ ಯಾಕ ನೀರ ಕೇಳತಿಯಲ್ಲಾ ಗುರ್ತಸಿಗವಲ್ಲದೇನ ಬೀಗ ರಂತ ತಿಳಿದೀದೇನ,

**ನಿಂಗಿ**— ಅಯ್ಯ ಮಾರಾಯಾ ನೀವೇನ ಗುರ್ತಹತ್ತದಾಂಗ ಆಗಿ ಯಲ್ಲಾ ಇದೇನು ಇಷ್ಟುದಿವ್ಸ ಯಲ್ಲಿ ಹೋಗಿದ್ದಿ

**ಸಂಗ**— ಗಂಡಗ ಕೈ ಕೊಟ್ಟು ಓಡಿಹೋಗು ಹೆಂಗ್ಸೂರಸಂಖ್ಯಾ ಕಡ್ಮಿ ಮಾಡಂತ ಬೇಡಿಕೊಳ್ಳುಕಾ ಪಂಡರಪುರ ವಿಠೋಬನ ಹತ್ತರ ಹೋಗಿದ್ದೆ ನಿಂಗೀ ಇದೇನು ನಿನ್ನ ಡೆರಸು ಯೇನ ಬಂಡಾ ಕೈಯಾಗ ಪರ್ರ್ಯಾಣ ಹಿಂಗ್ಯಾಕಅಂತ

**ನಿಂಗಿ**— ನನ್ನ ಬಂಡಾ ತಗೊಂಡ ಯೇನ ಸುದ್ದೀ ಮಾಡಬಾರದ ಪಾಪಾ ಮಾಡಿದೆ ಬಂಗಾರಂಥಾ ಗಂಡನೀನಗ ಮೋಸ ಮಾಡಿದೆ ಅದರ ಪಾಪಾನ ಈಗ ಅನಭೋಗಸ್ತೀನಿ ನನ್ನ ಮಾರಿ ನೋಡಬ್ಯಾಡಾ ನಿನಗ ಸಹಿತ ಪಾಪ ಬರತ್ತ ಇನ್ನ ನಾ ವುಳಿಯುವದಿಲ್ಲಾ ಕಡೀಗ್ಯಾರ ಭೆಟ್ಟಿ ಆಗಿ ಮಾರಿ ತೋರ್ಸಿದಿ ಸನಮಾಡಿ ಪ್ರಾಣಾ ಬಿಡತೀನಿ

**ಸಂಗ**— ಅಲಾನಿನ ನಿಂಗೂ ಸಾಯಾಕ ಭೆಟ್ಟಿ ಆದೇನು ನಿನ್ನ ಎಷ್ಟು ನಂಬಿದ್ದೆ ನಿನಗೇನ ತರಾಸ ಕೊಟ್ಟಿದ್ದೆ ಕೇಳಿದ್ದು ಇಲ್ಲಾ ಅಂತಿದ್ದಿಲ್ಲಾ ನನಗ ಮೋಸ ಮಾಡಿದಿ ಅದಕ ಈ ಅವಸ್ಥಿ ಆಗೀದಿ

**ನಿಂಗಿ**— ಆದದ್ದು ನೆನಸಿದರಬರುದೇನು ಇಲ್ಲೇ ದಾರ್ಯಾಗ ಸತ್ತೇನು ಮೊದಲ ಯಾವದರ ಗೂಡಿಸೇರಿಸು ದೇವರಿಗೆ ನಿನಗ ಸನಮಾಡಿ ಜೀವಾ ಬಿಡ ತೀನಿ ಸಂಕಟಾ ಹೆಚ್ಚಾತು ನಿಂದ್ರಾಕ ಬರವಲ್ಲದು ಗಡಾನ ನಡಿಯಮಾರಾಯಾ

**ಸಂಗ**— ನನಗ ಕಾಣುದ ಕಡೇ ಅಶೆ ಇತ್ತಾ ಮಾರಾಯಳ ಬಾ ಬಾ ಮೊದಲ ದುಡಿಕಿದರ ಇಂಥಾ ಕೆಡಕು ಬಿಟ್ಟಿದ್ದಲ್ಲಾ ಇನ್ನ ನಿನ್ನ ನೋಡಿ ಬುದ್ಧಿ ಗಲೀಲಿ ಗಂಡನ ಬಿಟ್ಟು ಓಡಿ ಹೋಗು ಹೆಂಣು ಬಾ ನಿನ್ನ ಮನಸಿಗೆ ಬಂದಲ್ಲಿ ಸಾಯಂತ ಬಾ ಬಾ ಬಾ

ಸಂಗನು ಭಜನಿ ಅನ್ನುತ್ತ ಕರೆದುಕೊಂಡು ಹೋಗುವನು

## ೨ನೇ ಪ್ರವೇಶ

### ಶ್ರೀ ಮಂತನ ಮನೆ

[ಟೇಬಲ್ ಮೇಲೆ ಶರಯುಬಾಟ್ಲಿ ಗ್ಲಾಸ ಹಂಟರ ಡ್ರಾಮಿನಲ್ಲಿ ಪಿಸ್ತೂಲ ಚಂದ್ರು ಕುಡಿಯುತ್ತ]

**ಚಂದ್ರು**— ಆಶೆ ಹೆಚ್ಚಿಸಿದಂತೆ ನಿರಾಶೆ ಮುಂದೋಡುತ್ತದೆ ಸುಸೀಲಾ ಸುಸೀಲಾ ಕನವರಿಸುವ ನನ್ನ ಕಣ್ಣಿಗೆ ಸೀನೊಂದು ಮುದ್ದುಮಣಿ ಸಾಗಿ ಬರ ಲಾರೆಯಾ ಯನ್ನ ಹೃದಯುದ ಚಿಂತಾಮಣಿ ನೀನೇ ನನ್ನ ಸರ್ವಸ್ವದ ಭಂಗಾರದ ಖನಿ ನನ್ನಾಶೆಯ ತೊತ್ತಿನ ರಾಣಿ ನೀನೆಲ್ಲಿದ್ದರೂ ಇನ್ನೊಂದು ಸಮಯ ಸಾಧಿಸಿ ತಂದು ಕಾಮತೃಪ್ತಿ ಪಡಿಸಿಕೊಳ್ಳುವೆ ಯಲ್ಲಿರುವೆ ಬೇಗ ಬಾ ಬಾ ಸುಸೀಲೆ ಯೇನು ಸುಸೀಲೆಯು ಬರಲಿಲ್ಲವೇ ಈ ಸಮಯ ಈ ಮನೆಯ ನಾಯಕಿ ಮೀರಾ ಇದ್ದರೆ ನನ್ನ ಕಾಮದಾಹ ನೀಗಿಸುತ್ತಿದ್ದಳು ಯಲ್ಲಿರುವೆ ಮೀರಾ ಬಾ ಕ್ಷಮಿಸುವೆ ( ಮತ್ತೇ ಕುಡಿಯುವನು )

**ರಘು**— ( ಪ್ರವೇಶಿಸಿ ) ಮೀರಾ ಮೀರಾ ಯಾರು ನೀನು ನನ್ನ ಫ್ರೆಂಡ್ ಚಂದ್ರು

**ಚಂದ್ರು**— ಯಾರು ಮೀರಾ ಮೀರಾ ಬಂದಿಯಾ ಬಾ ನನ್ನ ಬಳಿಗೆ ಪ್ರೇಮದ ಮುತ್ತಾದ ನಿನ್ನನ್ನು ಸಿಟ್ಟಿನ ಭರದಲ್ಲಿ ಜರಿದು ಹೊರನೂಕಿದೆ ಆದರೂ ಮತ್ತೆ ನೀನು ಬಂದಿಯಾ ಬಾ ನಿನ್ನನ್ನು ಕ್ಷಮಿಸುವೆ ಕಾಮದಾಹದಿಂದ ಪ್ರಭು

ಲ್ಲಿತನಾದ ಈ ನನ್ನ ಹೃದಯಕ್ಕೆ ನಿನ್ನ ಅಂಗಸ್ಪರ್ಶದಿಂದ ತಂಣಗಾಗುವವು ಈ ದೇಹ ಬೇಗ ನನ್ನ ಬಳಿಗೆ ಬಾ

**ರಘು**— ಥೂಪಾಪಾತ್ಮಾ (ಸ್ವಗತ) ನನ್ನ ಹೆಂಡತಿಯನ್ನು ಹೊರನೂಕಿ ಈ ಮನೆಯ ಸ್ವಾಮಿತ್ವಕ್ಕೆ ತಾನೇ ಅಧಿಕಾರಿಯಾಗಿರುವನೇ ಈ ಕಾಮಾಂಧನು

**ಚಂದ್ರು**— ಮೀರಾ ಸಿಟ್ಟಾಗಿರುವೆಯಾ ಕೋಪ ಮರೆತು ಬಿಡು ಮೀರಾ ನೀಯನ್ನ ಪ್ರೇಯಸಿಯಲ್ಲವೇ ನನ್ನ ತೃಪ್ತಿ ಗೊಳಿಸುವ ಮಹಾ ಕುಶಲ ವತಿ ಅಲ್ಲವೇ ನನಗಾಗಿ ನಿನ್ನ ಪತಿಯು ತಾಯನ್ನು ಕೊಲೆ ಮಾಡಿ ಫರಾರಿಯಾ ಗುವ ಆಟ ಹೂಡಲಿಲ್ಲವೇ ಇನ್ನು ನನ್ನ ನಿನ್ನ ಹೊರ್ತಾಗಿ ಇಲ್ಲಾರ ಭಯವಿಲ್ಲಾ ನಿನ್ನ ಪತಿ ಫರಾರಿ ನಿನ್ನತ್ತಿ ಸ್ವರ್ಗವಾಸಿ ಮಾವಾ ಪರದೇಶಿ ನೀನೆನ್ನ ರಾಣಿ ಪ್ರೇಮದಿಂದ ನುಡಿ ನಿನ್ನ ವಾಣಿ (ಮುಟ್ಟಲಿಕ್ಕೆ ಹೋಗುವನು)

**ರಘು**— (ಕಪಾಳಕ್ಕೆ ಹೊಡೆದು) ಥೂ ಅವಿವೇಕಿ ಶರೆಯ ಮದ ವೇರಿ ದೆಯೇ ನಿನಗೆ ದ್ರೋಹಿ ಸತಿ ಪತಿಯರಲ್ಲಿ ದ್ರೋಹ ಬಗೆದು ಘಾತುಕ ತನವನ್ನು ಮಾಡಿದಿಯಾ ಹೇಳು ನನ್ನ ಸತಿಯಲ್ಲಿ ಹೇಳು ನನ್ನ ತಂದೆ ಯಲ್ಲಿ ಹೇಳು ಹೇಳು

**ಚಂದ್ರು**— ( ಗುರ್ತಿಸಿ ) ಯಾರು ನೀನು ನನ್ನ ಸ್ನೇಹಿತಾ ರಘು ಈಗ ಬಂದಿಯ್ಯಾ ಪೋಲಿಸರು ನಿನ್ನನ್ನು ಬಂಧಿಸಲಿಲ್ಲವೇ

(ರಘು ಹಂಟರನಿಂದಾ ಹೊಡೆಯುತ್ತಾ)

**ರಘು**— ಚಂದ್ರು ಹೇಳು ನನ್ನ ಸತಿಯಲ್ಲಿ ಹೇಳು ಬೇಗಹೇಳು

**ಚಂದ್ರು**— ರಘು ನಿನಗೆ ವಂಚಿಸಿದಂತೆ ನನಗೂ ವಂಚಿಸಿ ಕೈ ಕೊಟ್ಟು ಹೋಗಿಹಳು ನೀನೇಕೆ ಮತ್ತೆ ಇಲ್ಲಿಗೆ ಬಂದೆ ವಳ್ಳೇ ಮಾತಿನಿಂದ ಹೊರಟು ಹೋಗುವಿಯೋ ಕೊಲಗಡಕನೆಂದು ಸರಕಾರಕ್ಕೆ ಒಪ್ಪಿಸಲೋ

**ರಘು**—(ಮತ್ತೆ ಹೊಡೆದು) ಯಾರ ಮನೆ ನನ್ನಮನೆಗೆ ಬಂದು ನನ್ನನ್ನೇ ಹೊರನೂಕಲು ನಿನ್ನ ತಲೆಕೆಟ್ಟಿದೆಯೇನು ಹುಂ ಹೇಳು ಯಲ್ಲಿ ಹೇಳು ನನ್ನ ಸತಿ ಇಲ್ಲವಾದರೆ ನೋಡು

**ಚಂದ್ರು**— ರಘು ಯಚ್ಚರದಿಂದ ಮಾತನಾಡು ನನ್ನ ಮನೆಗೆ ಬಂದು ಯದುರುವಾದಿಸುವಿಯಾ ಇನ್ನಾದರೂ ನಾನೇಳಿದಂತೆ ಕೇಳಿ ನಡೆ ಇಲ್ಲವಾದರೆ ತಪ್ಪಿದ್ದಲ್ಲಾ ನಿನಗೆ ಶರಮನೆ

**ರಘು**— ಛೀ ಮಿತ್ರ ದ್ರೋಹಿ ನನ್ನ ಬಾಳಿನಲ್ಲಿ ವಿಷ ಬೆರಿಸಿದೆ ನಿನ್ನ ಮಾತಿನ ತಾಳಕ್ಕೆ ಹೆಜ್ಜೆ ಹಾಕಿ ಜೀವನದಿ ಬೆಂದೆ ಲೋಕನಿಂದೆಗೆ ಗುರಿಯಾದೆ ಹುಂ ಇಲ್ಲಿಂದಾ ಹೊರಟು ಹೋಗವಿಯೋ ಕತ್ತು ಹಿಡಿದುದಬ್ಬಲ್ಯೋ

**ಚಂದ್ರು**— ( ಟೇಬಲಿನ ಹತ್ತ ಸರಿಯುತ್ತ ) ಇಷ್ಟು ವೀರಾ ವೇಶವಿದಿಯೇ ನಿನ್ನಲ್ಲಿ (ಡ್ರಾದಲ್ಲಿಯ ಪಿಸ್ತುಲು ತೆಗೆದುಕೊಂಡು) ನೋಡು ಕಣ್ತೆರೆದು ನೋಡು ಒಂದಡಿ ಮುಂದಿಟ್ಟಿಯ್ಯಾದರೆ ಬಲಿಯಾಗುವದು ನಿನ್ನ ಪ್ರಾಣಾ

**ರಘು**— ನಿನ್ನಂಥಾ ದುಷ್ಟ ಜಂತುವಿನ ಮಿತ್ರತ್ವ ಮಾಡಿ ನಿನ್ನ ಮೋಸದ ಮಾತಿಗೆ ಮರುಳಾಗಿ ಇಲ್ಲಿಯ ವರೆಗೂ ನಿನ್ನನ್ನು ಜೀವದಿಂದ ಬಿಟ್ಟಿದ್ದೆ ನನ್ನ ತಪ್ಪು ಗುಂಡು ಹಾರಿಸುವ ಮೊದಲು ನಿನ್ನೆದೆಯ ಗುಂಡಿಯ ರಕ್ತ ಕುಡಿ-ಯುವೆ ದ್ರೋಹಿ

(ಮೈ ಮೇಲೆ ಯೇರಿ ಹೋಗುವನು)

**ಚಂದ್ರು**— ಇದೋ ನೋಡು ರಘು ನನ್ನನ್ನು ಮುಟ್ಟಿದಿಯಾದರೆ ಹಾರುವದು ನಿನ್ನ ಪ್ರಾಣ ಹುಂ ಸರಿ ಹಿಂದಕ್ಕೆ ಕೇಳಲಾರಿಯಾ ನನ್ನ ಆಜ್ಞ ಹಾಂಗಾದರೆ ಅನುಭೋಗಿಸು ನಿನ್ನ ಫಲಾ ( ಗುಂಡುಹಾರಿಸುವನು ರಘು ನೆರಳುತ್ತಾ)

**ರಘು**— ಅಮ್ಮಾ ಅಪ್ಪಾ ತೀರಿತು ಈ ಮನೆಯ ಋಣಾ ಅಮ್ಮಾ ಅಮ್ಮಾ ( ಪ್ರಾಣ ಬಿಡುವನು )

**ಚಂದ್ರು**— ( ನಗುತ್ತಾ ) ಹುಲಿಯದುರು ನರಿಯ ಚಲ್ಲಾಟವೇ ಬಲಿಯಾಯಿತು ಜೇಟಿ ಈ ಮನೆಯು ನನ್ನದು ಆಸ್ತಿ ನನ್ನದು ಈ ಯಾನತ್ತು ಸಿರಿ ನನ್ನದು ಇನ್ನಾರ ಭಯವಿಲ್ಲಾ ( ನಗುತ್ತಾ ) ( ಕೈಯೊಳಗಿನ ಪಿಸ್ತುಲ ವಗೆಯುವನು )

**ಮೀರಾ**— ( ಪಿಸ್ತೂಲ ತೋರಿಸಿ ) ಪಾಪಾತ್ಮಾ ಯಾರಮನೆ ಯಾರ ಸಿರಿ ಪಾಪಪೂರಿತನಾದ ನೀನು ಜೀವದಿಂದ ಬದುಕಿದ್ದರಲ್ಲವೇ ಈ ಭಾಗ್ಯ ನೀನುಂಣುವದು

**ಚಂದ್ರು**— ( ರಮಿಸುವನಂತೆ ರಮಿಸಿ ) ಯಾರು ಮೀರಾ ನೀನು ಬಂದಿಯ್ಯಾ ಬಾ ರಾಣಿ ಇದೋ ನೋಡು ನಮ್ಮ ನಿಮ್ಮ ಬ್ಬಾಳಿನಲಿ ಅಡ್ಡಾಗಿ

ರುವ ನಿನ್ನ ಪತಿಯನ್ನೇ ಮುಗಿಸಿಬಿಟ್ಟೆ ಇನ್ನು ನಾನು ನೀನು ಈ ಮನೆಯ ಒಡೆಯರು ಬಾಹೀಗ ಕುಳಿತುಕೋ

**ಮೀರಾ**— ಥೂ ಚಾಂಡಾಲ ಇನ್ನು ನಿನ್ನ ಮರುಳ ಮಾತಿಗೆ ಬಲೆಯಾಗುವವಳು ನಾನಲ್ಲಾ ನನ್ನ ಮಾನವನ್ನು ಕಳೆದು ನನ್ನ ಪತಿಯನ್ನಳಿದ ನಿನ್ನನ್ನು ಮೊದಲು ಸಂಹಾರ ಮಾಡುವೆ ತೆಗೆದುಕೋ ಇದು ನಿನ್ನ ಪಾಪದ ಪ್ರತಿಫಲಾ ( ಗುಂಡು ಹಾರಿಸುವಳು )

**ಚಂದ್ರು**— (ಹಾಯ್ ಎಂದು ಬಿದ್ದು ಮರಣ ಹೊಂದುವನು)

( ಮೀರಾ ಮೃತನಾದ ರಘುವಿನ ಹತ್ತರ ಬಂದು )

**ಮೀರಾ**— ಸ್ವಾಮಿ ನಾನು ಮೊದಲೇ ಇಲ್ಲಿಗೆ ಬಂದಿದ್ದರೆ ಈ ದುಷ್ಟನ ಕೈಯಿಂದ ನಿಮ್ಮನ್ನು ಉಳಿಸುತ್ತಿದ್ದೆ ಪತಿದೇವಾ ನನ್ನಿಂದಾ ನಿಮ್ಮ ವಂಶವೇ ಲೋಪವಾಯಿತು ನಿಮ್ಮ ಮನೆ ಬೆಳಗಿಸುವ ಸತಿಯಾಗಿ ಬರಲಿಲ್ಲಾ ಮನೆಯನ್ನಳಿಯಲು ಮಾರಿಯಾಗಿ ಬಂದೆ ಈ ಶತಕೃತ್ಯಗಳಿಗೆಲ್ಲಾ ನಾನೇ ಕಾರಣಳು ಇನ್ನು ನಾ ಈ ಜಗದಲಿ ಜೀವಿಸಲು ಸ್ಥಳವಿಲ್ಲಾ ಯಾರೂ ನನಗೆ ಸ್ಥಾನಮಾನ ಕೊಡರು ನಾನು ಜಾರಣಿ ನನ್ನ ಜಾರತನದ ಪ್ರತಿಫಲಾ ನಾನುಂಣುವೆ ಇದೋ ಸ್ವಾಮಿ ನಿಮ್ಮಹಿಂದೆ ನಾನೂ ಬಂದೆ ಯಲ್ಲೈ ಪಾಪಿಕರವೇ ನಿನ್ನಿಂದಲ್ಲೇ ಈ ಪಾಪಿ ಜನ್ಮವು ಹಾರಲಿ ಇದೋ ಬಂದೆ ಸ್ವಾಮಿ ಬಂದೆ (ಗುಂಡು ಹೊಡೆದು ಕೊಳ್ಳುವಳು) ( ಮೀರಾ ಮೃತಳಾಗುವಳು )

**ಈಶ್ವರಪ್ಪಾ**— ಇದು ನನ್ನ ಮನೆ ನನ್ನ ಮನೆ ( ಮೃತದೇಹಗಳನ್ನು ನೋಡಿ ) ಯಾರಿವರು ಹೀಗೆಕೆ ಮಲಗಿಹರು ( ಚಂದ್ರುವಿನ ನೋಡಿ ) ಇವನಾರು ಹಾ ಇವನು ನನ್ನ ಮಗನ ಸ್ನೇಹಿತ ಚಂದ್ರು ಇದೇನು ಇವನಿಗೆ ಗುಂಡು ಬಡಿದಿದೆ ರಕ್ತಸುರಿಯುತ್ತದೆ ಇವನು ಸತ್ತು ಹೋಗಿಹನು ಸಂತೋಷವಾಯಿತು ( ಮೀರಾವತಿ ನೋಡಿ ) ಇವಳು ನನ್ನ ಸೊಸೆ ಮೀರಾ ಅಲ್ಲಲ್ಲಾ ಘಾತಕಿ ಇವಳೂ ಮರಣ ಹೊಂದಿದ್ದಾಳೆ ಆನಂದಾ ( ರಘುವಿನ ನೋಡಿ ) ಇವನಾರು ನನ್ನಮಗ ರಘುವೀರನೇ ಹೌದು ನಿಜ ನೀನು ನಿರಪರಾಧಿ ನಿನಗೂ ಗುಂಡು ಬಡದಿದೆಯಲ್ಲಾ ನೀನೂ ಮೃತನಾದೆಯಾ ಇದೇನಾಶ್ಚರ್ಯ ಇವರು ರಕ್ತದ ಮಡುವಿನಲ್ಲಿ ಬಿದ್ದಿಹರಲ್ಲಾ ರಕ್ತಾ ಅಂದು ಶ್ಯಾಂತಿಯಿಂದ ತುಂಬಿದ ಮನೆ ಇಂದು ಅಶಾಂತತೆಯ ಬಿರುಗಾಳಿಗೆ ಸಿಕ್ಕಿದೆ ಅಂದು ಹಾಲು ಜೇನುಹರಿ

ಯ:ತಿ ದ್ದ, ಈ ನನ್ನ ಮನೆಯಲ್ಲಿ ರಕ್ತದ ರಂಜಿತವಾದ ನನ್ನ ಮನೆ ವೃತ್ಯುವಿನ ಪಂಜರವಾಗಿದೆ(ವಿಕಾರ ತಪ್ಪಿ)ನನ್ನ ವಂಶ ಅಳಿಯಿತು ನನ್ನದು ಮುಳಗಿತು ರಘು ರಘು, ಗೌರಾ, ಗೌರಾ (ಕೆಮ್ಮುತ್ತಾ) ಗೌರಾ ಮೇಲೆ ನಿಂತು ಈ ಮನೆಯ ಭೀಕರ ಚಿತ್ರವನ್ನು ನೋಡುತ್ತಿರುವಿಯಾ ನಾನು ಸಹಾ ನಿನ್ನ ಸಾನ್ನಿಧ್ಯಕ್ಕೆ ಬಂದೆ ಗೌರಾ ಬಂದೆ (ಕೆಮ್ಮುತ್ತ ರಕ್ತಕಾರಿ ವೃತನಾಗುವನು)

## ೨೧ ನೇ ಪ್ರವೇಶ

(ವಕೀಲನು ವಿಚಾರಿಸುತ್ತ)

**ಅಶೋಕ**— ಅಬ್ಬಾ ಯಂಥ ಭೀಕರ ಚಿತ್ರ ತಂದೆ, ಮಗಾ, ಸೊಸೆ ಮತ್ತು ಚಂದ್ರು ಯಲ್ಲರೂ ವಂದೇ ಮನೆಯಲ್ಲಿ ವೃತರಾದರೆಂದು ಊರಿಗೆ ಊರೇ ಆಡಿಕೊಳ್ಳುತ್ತಿದ್ದಾರೆ ಅವರೆಲ್ಲರೂ ನನಗೂ ನೋಡಿ ಕೈ ಮಾಡಿ ತೋರಿ ಸುತ್ತಿರುವರು ಸತಿ ತಂದೆಯನ್ನು ಅನ್ಯಾಯದಿಂದ ಹೊರನೂಕಿದ ಚಂಡಾಲ ನೆಂದು ಪಾಪದಿಂದ ಗಳಿಸಿದ ಹತ್ತು ಸಾವಿರ ರೂಪಾಯಿ ನನ್ನ ಬೇನೆಯ ಸಲು ವಾಗಿ ಡಾಕ್ಟರರಿಗೆ ತ:ತ್ತಾದವು ನಾನು ನಿಷ್ಕರುಣಿ ವುಪ್ಪು ವುಂಡವರಿಗೆ ದ್ರೋಹ ಬಗೆದವನೆಂದು ತಿಳಿದು ವಬ್ಬರಾದರೂ ನನ್ನ ಬಳಿಗೆ ಬಾರದಂತಾದರು ವಕೀಲ ವೃತ್ತಿಯಲ್ಲಿ ವಬ್ಬ ಪಕ್ಷಗಾರರೂ ಬಾರದೆ ಲಾಭವಿಲ್ಲದಂತಾಗಿದೆ ಬೆರೇ ಕಡಿಗೆ ದುಡಿಯಬೇಕೆಂದರೆ ಊರಲ್ಲಿ ಮುಖವೆತ್ತಿ ಬಾಳದಂತಾಗಿದೆ ಇನ್ನು ನಾನು ಬದುಕುವದೆಂತು ಬದುಕಲಾರೆ ಇದೆಲ್ಲವೂ ಹಡೆದ ತಂದೆಯನ್ನು ಮಾಡಿಕೊಂಡ ಹೆಂಡತಿಯನ್ನು ಅತ್ಯಾಚಾರದಿಂದ ದೂಡಿದ ಪಾಪಕ್ಕೆ ತಕ್ಕ ಪ್ರಾಯಶ್ಚಿತ ಪಡು ತ್ತಿದ್ದೇನೆ ಗುಣವತಿ ಸುಸಿಲಾ ಇವಳನ್ನು ಕಡೆಗಣಿಸಿ ಬೀದಿಯ ಭೀಕಾರಿಯ ನ್ನಾಗಿ ಮಾಡಿದ ಮಹಾ ಪಾಪವೇ ಅನಂತ ಕಷ್ಟ-ಕಾರ್ಪಣ್ಯಗಳನ್ನನುಭವಿಸ ಹತ್ತಿದ್ದೇನೆ ತಿರಿದು ತಿನ್ನುವರು ನಿನ್ನ ಹಡೆದಾತನೆಂದು ಜನರಾಡುವ ನ.ಡಿ ಕಿವಿ-ಯ್ಯಾರೆ ಕೇಳಿದರೂ ನಿರ್ದಾಕ್ಷಿಣ್ಯವಾಗಿ ನಡೆದುಕೊಂಡದ್ದೇ ನನ್ನ ಬೇನೆಗೆ ಕಾರಣವಾಯಿತು ಯಲ್ಲಿಹರೋ ಯಂಬದು ತಿಳಿದು ಬಂದರೆ ಕೂಡಲೇ ಹೋಗಿ ಕ್ಷಮಿಸಬೇಕೆಂದು ಕಾಲ ಹಿಡಿದು ಕರೆತರುವೆ ಯಲ್ಲಿಹನೋ ನನ್ನ ಹೆತ್ತಾತನು ಯಷ್ಟು ಕಷ್ಟಪಡುತಿಹಳೋ ನನ್ನ ಭಾಗ್ಯವತಿ ಸುಶಿಲಾ

**ಸಂಗ**— ( ಪ್ರವೇಶಿಸಿ ) ಯಾಕ್ರಿ ಯಪ್ಪಾ ವಕೀಲಪ್ಪವರೇ ಇಲ್ಲೆ ದಾರ್ಯಾಗ ನಿಂತಿರಲ್ಲಾ ಇನ್ನು ಯೇನೇನ ಗೇನಕಿ ಹಾಕಿರಲ್ಲಾ ಓಟು ವ್ಯೆಯಾಗ ಆಗ್ಯೆತೇನ್ರಿ ಅರಾಮ

**ಅಶೋಕ**— ಇಲ್ಲ ಸಂಗಂಣಾ ಗುಣವಾಗುವ ಲಕ್ಷಣ ಇಲ್ಲಾ ಯೇನು ಮಾಡಬೇಕು ನನ್ನ ದೈವಕ್ಕೆ ನಾನೇವಿನಾಶ ತಂದು ಕೊಂಡಂತಾಗಿದೆ ಸಂಗಂಣಾ ನನ್ನ ತಂದೆ ನನ್ನ ಹೆಂಡತಿ ಇರುವ ಸ್ಥಾನವೇನಾದರೂ ನಿನಗೆ ತಿಳಿದರೆ ಹೇಳು ಸಂಗಂಣಾ

**ಸಂಗ**— ಅ ಬ ಬ ಬ ಬ ಇದೇನ್ರಿ ಯಪ್ಪಾ ನಿಮ್ಮ ಬಾಯ್ಯಾಗ ಯಾಕ ಬಂತು ತಂದಿ ಹೇಣ್ತಿ ಅನ್ನು ಶಬದಾ

**ಅಶೋಕ**— ಸಂಗಂಣಾ ಅವರಿಗೆ ಮಾಡಿದ ಪಾಪವೇ ವಿಧಿಯ್ಯಾಗಿ ಬೆನ್ನು ಹತ್ತಿದೆ ಬೇಗ ಹೇಳು ನೀನೆಲ್ಲಿಯಾದರೂ ನೋಡಿರುವಿಯಾ ಹೇಳು

**ಸಂಗ**— ಈಗ ಬುದ್ಧಿ ಬಂತಯೇನ್ರಿ ಯಪ್ಪಾ ನಾನೂ ಹೇಳಬೇಕು ಅಂತಾ ಮಾಡಿದ್ದೆ ದೊಡ್ಡ ವಕೀಲ್ರ ಕೆಲ್ಸಾಕಂಡಾಬಟೆ ಕಲತವರು ಹಿಂದಿ ನಿಂದಾ ಮನಸಿಗೆ ಹಚಗೊಂಡಾರು ಅಂತಾ ಸುಮಾಕಾ ಇದ್ದೆ ಇಕಾ ನೋಡ್ರಿ ಯಪ್ಪಾ ನನಗ ತಿಳಿದ ಮಟ್ಟಿಗೆ ಹೇಳಿಬೇಕಂದ್ರು ಗುರುಹಿರೇರು ತಂದಿ–ತಾಯಿ ದೇವರು ಇವರನೆಲ್ಲಾ ಯಾರ ಕೆಟ್ಟರೀತಿಯಿಂದಾ ನೋಡ್ತಾರ ಅಂಥವರಿಗೆ ಪಾಪ ಯೇನ ಬಿಟ್ಟಿದ್ದಲ್ಲಾ ಬಂಗಾರದಂಥಾ ಸುಸೀಲವ್ವಾ ಗುಡ್ಯಾಗ ಹಡದ ತಿರಕರಾಂಗ ಆದಾರ ನಿಮ್ಮ ಅಪ್ಪಾರು ತಿರಕೊಂಡು ಬಂದು ತಾಯಿಗೆ ಮಗ್ಗ ಜೋಪಾನ ಮಾಡತಾರ ಅವರಿಗೆ ನಿಮ್ಮಂಥಾ ವಕೀಲರು ಮಕ್ಕಳಾದರೂ ತಿರ ಕೊಳ್ಳುದು ತಪ್ಪಿಲ್ಲಾ ಅಂದ ಬಳಿಕ ನಿಮುಗ ಸುಖಾ ತಟ್ಟಂದ್ರ ಹ್ಯಾಂಗ ತಟ್ಟೇತು ಅಂದೆ

**ಅಶೋಕ**— ನಿಜ ಸಂಗಂಣಾ ಅಶಿಕ್ಷೀತ ನೀನಾಗಿದ್ದರೂ ಜ್ಞಾನದ ತಿಳಿ ಬೆಳಕು ನೀಡಿದೆ ನಡೆ ಸಂಗಂಣಾ ಮೊದಲು ಅವರೆಲ್ಲಿಹರು ತೋರಿಸು

**ಸಂಗಂಣಾ**— ನಡ್ರೀ ಯಪ್ಪಾ ನಾ ತೋರಸ್ತೀನಿ ಪಾಪಕ್ಕ ಜಯಾ ಇಲ್ರಿ ನಿನ್ನೆ ನಮ್ಮದು ಹೇಣ್ತಿ ಸತ್ತ ಹೋತ್ರಿ ಯಪ್ಪಾ ಯಂಣಿ ಇದ್ದಾಗ ದಿಮಾ ಕಾಮಾಡಿ ದಾರಿಬಿಟ್ಟ ನಡದರ ಕಡಿಗೆ ಇಂಥಾ ಗೋಳು ಯಾರಿಗೂ ಬಿಟ್ಟ ದ್ದಲ್ಲಾ ಬರ್ರಿ ಯಪ್ಪಾ ಬರ್ರಿ ಹೋಗುನು

**ಅಶೋಕ**— ಆಗಲಿ ನಡಿ ಸಂಗಂಣಾ ಬೇಗನಡಿ

# ೨೨ ನೇ ಪ್ರವೇಶ

## ಬಸವೇಶ್ವರನ ಗುಡಿ

ಸುಸೀಲಾ ಮಗುವನ್ನು ತೊಡೆಯ ಮೇಲೆ ಹಾಕಿಕೊಂಡು ಅಳುತ್ತಾ ಕುಳಿತಿರುವಳು

## ಸುಶೀಲಾನ ಪದಾ

ರಾಗ ಭೈರವಿ ತಾ ಜಂಪಾ

ತಂದೆ ಸ್ವೀಕರಿಸೆನ್ನ ಮಾಯದಾ ದೇಹವನು
ನಾಯಿ ನರಿಗಳ ತೆರದ ಜೀವಿಸಿರಲಾರೆ ||
ಪತಿಸೇವೆ ಹತಳಾಗಿ ಧಾತ್ರಿಯೋಳ್
ಇರಲಾರೆ ಹತಭಾಗಿಯಾದೆನಗೆ
ಪತಿ ಪದವನನು ಗ್ರಹಿಸೋ ||ತಂ||

ಮಗು ನೀನೆನ್ನ ಅರಗಿಣಿ ನೀನೆನ್ನ ಮುದ್ದು ಮಣಿ ಮಗು ಸುಶಿಕ್ಷಿತ ಶ್ರೀ ಮಂತ ವಕೀಲರ ಮಗು ನೀನಾದರೂ ನಿನ್ನ ಬೆನೆಗೆ ಔಷಧಿ ತರಲು ಬಿಡಿ ಕಾಸು ನನ್ನಲ್ಲಿ ಇಲ್ಲಮಗು ಏರೀದ ಜ್ವರ ಈವರೆಗಾದರೂ ಆರಲಿಲ್ಲಾ ನಿನ್ನ ಬತ್ತಿದ ಮುಖ ಕಂಡು ತಾಯಿಯ ಕರುಳು ಕತ್ತರಿಸಿ ಹಾಕಿದಂತಾಗುತ್ತಿದೆ ಯಪ್ಪಾ ನಾನೇನು ಮಾಡಲಿ ಅನಾಥ ಅಬಲೆಯಳು ಮಗು ಮಗು ಅಳ ಬೇಡವಪ್ಪಾ ನೀನತ್ತು ನಿನ್ನ ತಾಯಿಯನ್ನು ಮತ್ತಿಷ್ಟು ದುಕ್ಖಾಗ್ನಿಯಲ್ಲಿ ದೂಡ ಬೇಡಾ ನಿನ್ನಜ್ಜ ಔಷಧಿತರಲು ಹೋಗಿದ್ದಾನೆ. ಒರಲಿ ಸ್ವಲ್ಪ ಶಾಂತನಾಗಪ್ಪಾ ದೇವಾ ಪರಮೇಶ್ವರಾ ನಾ ನಿನ್ನಲ್ಲಿ ಇಂಥ ದುಃಖವನ್ನೇ ಬೇಡಿ ಬಂದಿಹನೇ ಇನ್ನು ಆ ಸಿರಿಸೌಖ್ಯವು ಬೇಡಾ ನಿನ್ನಂಥ ಸುಖಿ ಸಾಮ್ರಾಜ್ಯ ನೀಡ ದಿದ್ದರೂ ಈ ಮುದ್ದು ಮಣಿಯೊಂದು ನನ್ನಡಿಯಲ್ಲಿ ನಲಿದಾಡುವ ಭಾಗ್ಯ ನೀಡು ಇನ್ನು ನನಗೆ ಈ ಮಗು ಅಲ್ಲದೆ ಬೇರೆಯಾವ ಸಂತೋಷವು ಇಲ್ಲಾ

**ರಂಗಪ್ಪ—** (ಔಷಧಿ ಬಾಟ್ಲಿ ಹಿಡಿಕೊಂಡು ಬರುವನು) ಸುಸೀಲಮ್ಮಾ, ಇಕಾ ಈ ಔಷಧಾ ಹಾಕತಾಯಿ ಗುಣ ಆಗಲಿ ಅಂತಾ ಬಸವಂಣಗ ಬೇಡಿ ಕೊಂಡು ಅಂಗಾರ ಹಚ್ಚು ನಿನ ಮಗ ಯೇನೂ ಆಗುದಿಲ್ಲಾ ನನಗಷ್ಟು ಈ ದೇವರ ಮ್ಯಾಲೆ ನಂಬಿಗಿ ಐತಿ

**ಸುಶೀಲಾ**— ಮಾವಮಾ ನಿಮ್ಮ ವಾಕ್ಯವು ನಿಜವಿರುತ್ತದೆ ಈ ದೇವರು ನಂಬಿದವರ ಕೈ ಬಿಡನು ಯಲ್ಲ ಭಾರವೂ ಇವನದೇ ದೇವಾ ಜಗ ದ್ರಕ್ಷಕಾ ಕಾಡುವದು ನೀಡುವದು ನಿನ್ನದಲ್ಲದೆ ಅನ್ಯರ ಆಟ ಇದಲ್ಲಾ ರಕ್ಷಕನು ಶಿಕ್ಷಕನು ನೀನಿರುವಾಗ ಅನ್ಯರನ್ನು ನಂಬಿ ಫಲವಿಲ್ಲಾ ಬೇಗ ನಮ್ಮನ್ನು ರಕ್ಷಿಸು ದೇವಾ (ಮಗನಿಗೆ ಔಷಧ ಕುಡಿಸಿ ಅಂಗಾರ ಹಚ್ಚುವಳು ರಂಗಪ್ಪನು ಚಿಂತಿಮಾಡಿ ಕೂಡ್ರುವನು ಸಂಗಂಣಾ ಅಶೋಕಾ ಬರುವರು.)

**ಸಂಗಂಣಾ**— ಯಪ್ಪಾ ಇಲ್ಲೇ ಅದಾರ ನೋಡ್ರಿ ಅವ್ವಾ ಕೂಸು ಕಟಿ ಗೊಂಡ ಹೇಗ ಕುಂತಾಳ ನೋಡ್ರಿ ಯಪ್ಪಾ

**ಅಶೋಕ**— ಅಪ್ಪಾ ಅಪ್ಪಾ ( ಕಾಲಿಗೆ ಬಿದ್ದು ) ನನ್ನನ್ನು ಕ್ಷಮಿಸಪ್ಪಾ ಅಜ್ಞಾನದಿಂದ ದೂಡಿದ ನಿಮ್ಮ ತಾಪ ಶ್ಯಾಪವಾಗಿ ಅನೇಕ ತರಹದಿ ಕಾಡುತ್ತಿದೆ ಇಲ್ಲಿಯವರೆಗೂ ನಾನು ಮಾಡಿದ ಅಪರಾಧವನ್ನು ಕ್ಷಮಿಸಿ ನಿನ್ನ ಮಗನನ್ನು ಕಾಪಾಡು ತಂದೆ

**ರಂಗಪ್ಪ**— ಅಶೋಕಾ ಈಗ ನೆನಪಿಗೆ ಬಂತೇನಪಾ ನಿನ್ನಂಥಾ ವಿದ್ಯಾ ವಂತ ಮಗನ ಮಗ ಇದ್ರೂ ಬೀಕ್ಷಾ ಬೇಡುವ ಸ್ಥಿತಿಗೆ ಗುರಿಮಾಡಿದಿ ಈಗ ಮನ್ನಿಸು ಅಂತಾ ಬಂದರೆ ನಿನ್ನನ್ನು ಕ್ಷಮಿಸುವವನು ನಾನಲ್ಲಾ ಇಡೋ ನಿನ್ನ ಹೆಂಡತಿ ಸಾವಿತ್ರಿ ಮಲ್ಲಮ್ಮಾ ಇದ್ದಹಾಗ ಇರುವ ಭಾಗ್ಯದೇವತಾ ಸುಸೀಲವ್ವಾ ಅದಾಳಅಲ್ಲ ಕೇಳಿ ಕೋ

**ಅಶೋಕ**— ನಿಜ ಅಪ್ಪಾ ಈ ಭಾಗ್ಯ ಲಕ್ಷ್ಮಿಯನ್ನು ಕಡು ತಾಪದಲ್ಲಿ ನೂಕಿದೆ ಇವಳೇ ನನ್ನ ವಂಶೋದ್ಧಾರಳಾದ ಭಾಗ್ಯ ರತ್ನ ಸ್ತ್ರೀಯರಲ್ಲಿ ಮಿಗ ಲಾದ ಸ್ತ್ರೀರತ್ನ ಇವಳಿಂದಲೇ ನನ್ನ ಮನೆ ನನ್ನ ಮಾನ ನನ್ನ ಧನಾ ಇವಳಿಂದೇ ಭಾರತ ಮಾತಾ ಇಂಥಾ ಸ್ತ್ರೀಯರನ್ನು ಜಲ್ಮವೆತ್ತಿದ ನಿನ್ನ ಪಾದಕ್ಕೆ ಅನಂತ ವಂದನೆಗಳು ಸುಸೀಲಾ ಸುಸೀಲಾ ಕ್ಷಮಿಸು ಈ ನಿನ್ನಪತಿಯನ್ನು ( ಪಾದಕ್ಕೆ ಬೀಳುವನು )

**ಸುಶೀಲಾ**— ಯೇಳು ಸ್ವಾಮಿ ಕ್ಷಮಿಸುವ ಶಕ್ತಿ ಈ ಸತಿಗಿದೆಯೇ ಪಶ್ಚಾತಾಪವೇ ಕ್ಷಮೆಯಮೂಲ ನಿಮ್ಮ ಸಮ್ಮುಖದಿ ನಾನೆಷ್ಟರವಳು ಕಳೆದು ಕೊಂಡ ನನ್ನ ಮಂಗಲ ಮೂರ್ತಿಯ ದರಶನಪಾಯಿತು ಇದೇ ನನ್ನ ಭಾಗ್ಯ

ಇದೋ ನಿಮ್ಮ ಕುವರ ಹಡೆದಾತನ ಮುಖ ನೋಡಲು ಎಷ್ಟು ಆತುರ ಪಡು ತ್ತಿದ್ದಾನೆ

**ಅಶೋಕ**— ಇದು ನನ್ನ ಮಗುವೇ ಬಾಮಗು ನೀನೇ ನನ್ನ ಪಡೆದ ಮುತ್ತು

**ಸಂಗಂಣಾ**— ಆಗಾಗ ಪುಷ್ಟು ಚಂದ ಐತ್ರಿ ಕೂಸು ಸುದ್ದ ತಂದಿನ ಹೊತ್ತೆ ತ್ರೀ ತರ್ರೀಯಪ್ಪಾ ನಾವೆಲ್ಲ ಯತಕೊಂತಿನಿ ( ಮುದ್ದಾಡಿ ) ಯಪಾ ಹೆಸರ ಯೇನಂತ ಇಟ್ಟೀರ್ರಿ

**ರಂಗಪ್ಪ**— ಬಸವರಾಜ ಅಂತಾ ಇಟ್ಟೇವಿ ಈ ಬಸವಂಣನ ಗುಡ್ಯಾಗ ಹುಟ್ಟೇದಕ ಆತನ ಕೃಪಾನ ಐತಂತ ಬಸವರಾಜ ಅಂತಾ ಕರೀತೀವಿ

**ಅಶೋಕ**— ಅಪ್ಪಾ ತಕ್ಕ ಹೆಸರು ಲೋಕಕಲ್ಯಾಣಕ್ಕಾಗಿ ತನು ಮನ ಧನ ನೀಡಿ ಅಜರಾಮರವಾದ ಬಸವರಾಜ ಹೆಸರು ಪವಿತ್ರವಾಗಿದೆ ಅಂಥ ಮಹಾತ್ಮರ ಹೆಸರು ನನ ಮಗುವಿಗೆ ಇಟ್ಟದ್ದು ಬಹಳ ಸಂತೋಷದ ಸಂಗತಿ ಅಪ್ಪಾ ಬನ್ನಿ ಬೇಗ ಮನೆಗ ಹೋಗುವಾ

**ರಂಗಪ್ಪ**— ಅಶೋಕಾ ನನ್ನ ಹೆಂಡತಿ ಮಂದ ಕರಕೊಂಡು ಹೋಗು. ಹಂಗಿನ ಕೂಳಿಗಿಂತ ದೇವನ ಗುಡಿಯೇಲೇಸು ಅಂತಾ ತಿಳಿದ ನಾನು ಇಲ್ಲೇ ಇರತೀನಿ ಅಷ್ಟ ಮಾಡಪಾ

**ಸುಶೀಲಾ**— ನಡಿಯಿರಿ ಮಾಮಾ ಮಕ್ಕಳು ತಪ್ಪು ಮಾಡುವದಿಲ್ಲವೇ ಅದರಂತೆ ನೀವು ನಾವು ಕೂಡಿಯೇ ಹೋಗುವಾ ನೀವು ಬಾರದೆ ಇದ್ದರೆ ನಾನು ಹೋಗುವದಿಲ್ಲಾ ನಿತ್ಯ ನಿಮ್ಮ ಸೇವೆ ಮಾಡಿ ಪುನೀತಳಾಗಬೇಕಾದಾಗ ನೀವಿಲ್ಲದಿದ್ದರೆ ನಾಹೇಗೆ ಇರುವದು ಹೋಗಿರಿ ನಾನು ಬರುವದಿಲ್ಲಾ

**ಅಶೋಕ**— ಅಪ್ಪಾ ತಪ್ಪಾಯಿತು ಕ್ಷಮಿಸಪ್ಪಾ ತಾಯಿ ಸತ್ತಾಗಿನಿಂದ ನಿನ್ನ ಬಾಯೊಳಗಿನ ತುತ್ತಿಟ್ಟು ತಾಯಿಯಂತೆ ಜೋಪಾನ ಮಾಡಿ ನೀನೆ ನನ್ನ ಮೇಲೆ ಕೋಪಿಸಬೇಕೆ ನೀನು ಬಾರದಿದ್ದರೆ ನಿನ್ನ ಸಮ್ಮುಖದಲ್ಲಿ ಇಂದೇ ಆತ್ಮ ಹತ್ಯ ಮಾಡಿಕೊಂಡು ಬಿಡುತ್ತೇನೆ ತಾತಾ ಕ್ಷಮಿಸು

**ರಂಗಪ್ಪ**— (ದುಃಖದಿಂದ) ಅಶೋಕಾ ನೀನಾಡು ನುಡಿ ನಿಜ ಅಂತೆಯೇ ಈ ನಿನ್ನ ತಂದೆಯ ಕರಳು ಮಿಡಕುತ್ತದೆ ಆಗಲಿ ನಡಿಯಪ್ಪಾ ಇದೆಲ್ಲಾ ಸಿವ-ನಾಟ ನಡೆನಡೆ ತಾಯಿ ಈವರೆಗೆ ಆಶ್ರಯ ನೀಡಿದ ಈ ಬಸವೇಶ್ವರನ ಸ್ಮರಿಸಿ ಮನೆಗೆ ಹೋಗುವಾ ಬಾ ಸಂಗಣಾ ದೇವರ ಮೇಲೆ ಭಾರ ಹಾಕಿ ಹೋಗುವಾ

**ಶುಭ ಮಂಗಲಂ**

# ನಮ್ಮಿಂದ ಪ್ರಕಟವಾದ ಸಂಗೀತ ನಾಟಕಗಳು



ನಾಟ್ಯ ಕವಿರಾಜ ರತ್ನ ತಿಲಕ ಮಹಾಂತೇಶ ಶಾಸ್ತ್ರಿ ಕೃತ
(ಗುಬ್ಬಿ ಕಂಪನಿ ಪ್ರಯೋಗಿಸುತ್ತಿರುವ)

**ಅಣ್ಣ-ತಮ್ಮ** ಸಾಮಾಜಿಕ (ಕೌಟುಂಬಿಕ) ನಾಟಕ ೩--೦೦

ಎಮ್. ಎಸ್. ಮಾಧವರಾವ ಕೃತ

**ಸಂತಾನಲಕ್ಷ್ಮಿ** ಸಾಮಾಜಿಕ ನಾಟಕ ೨--೦೦

ಷ. ಸಿ. ಭಾಂಡಗೆ ಕೃತ

**ಕಾನೂನು** ಸಾಮಾಜಿಕ ನಾಟಕ ೧--೭೫

ಎಚ್. ಆರ್. ಭಸ್ಮೆ ಕೃತ

**ಭಾಗ್ಯದೇವತೆ** ಸಾಮಾಜಿಕ ನಾಟಕ ೧--೭೫

**ಮುತ್ತೈದೆ** ಸಾಮಾಜಿಕ ನಾಟಕ ೧--೭೫

ರಾ. ಯ. ಮೂಲಿಮನಿ ಕೃತ

**ಶಿವಶರಣ ವೀರಸಂಗಯ್ಯ** ಪೌರಾಣಿಕ ನಾಟಕ ೧--೭೫

ಸಾಳುಂಕೆ ಕೃತ (ಗೋಕಾಕ ಶ್ರೀಶಾರದಾ ಕಂ. ಪ್ರಯೋಗಿಸುವ)

**ಅಕ್ಕನ-ಮಗಳು** ಸಾಮಾಜಿಕ ನಾಟಕ ೧--೭೫

ನೀಲಕಂಠ ಕೃತ

**ಆದರ್ಶಸೊಸೆ** ಸಾಮಾಜಿಕ ನಾಟಕ ೧--೭೫

ಶ್ರೀನಿವಾಸ ಕೃತ (ಲಕ್ಷಾಂತರ ಪ್ರೇಕ್ಷಕರ ಕಣ್ಮನಗಳನ್ನು ತಣಿಸಿದ)

**ಅತ್ತೆ-ಸೊಸೆ** ಸಾಮಾಜಿಕ ನಾಟಕ ೨--೦೦

**ಅಮರಪ್ರೇಮ** ಸಾಮಾಜಿಕ ನಾಟಕ ೨--೦೦

**ರಾಜಾವಿಕ್ರಮ** ಪೌರಾಣಿಕ ನಾಟಕ ೨--೦೦

ಮುಕ್ತಿದಾಯಕ ಬಂದೇಶನ ಕೈವಲ್ಯಕಲ್ಪವೃಕ್ಷ ೨--೦೦

## — ನಮ್ಮಿಂದ ಪ್ರಕಟವಾದ ಇತರ ಸಣ್ಣ ಪುಸ್ತಕಗಳು —

೧ ಬಂದೇಶನ ತತ್ವ ಪದಗಳು ೦--೩೭

೨ ಬಸವಲಿಂಗ ನಾಮಾವಳಿ ೦--೧೯

೩ ತ್ರಿಮೂರ್ತಿಗಳ ವಚನ ಸಂಗ್ರಹ ೦--೩೭

೪ ಹದಿನಾರು ಸೋಮವಾರ ವ್ರತ ೦--೩೭

೫ ಶನಿದೇವರ ಮಹಾತ್ಮೆ ೦--೩೭

೬ ಶ್ರೀ ವೀರಭದ್ರೇಶ್ವರ ವಡಬುಗಳು ೦--೩೭

೭ ಶಿವ-ಶರಣರ ಸಂಗೀತ ವಚನಗಳು ೦--೩೭

**ಎಮ್. ಎಸ್. ಶಾಬಾದಿಮಠ ಬುಕ್-ಡಿಪೋ,**

**ಪ್ರೊ|| ಎಸ್. ವ್ಹಿ. ಶಾಬಾದಿಮಠ**